CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೧೫, ೨೦೦೪ (ಚೈತ್ರ ೨೬, ಶಕ ವರ್ಷ ೧೯೨೬) | ಸಂಚಿಕೆ ೧೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್:9:04-ಎಫ್ ದಿನಾಂಕ: 12ನೇ ಮಾರ್ಚ್ 2004**

**ಅರ್ಜಿದಾರರು :** ಶ್ರೀಮತಿ ನಫೀಸ್ W/o ದಿ: ಹೈಡ್ರೂಸ್, ನ್ಯೂ ಪಡ್ಡುಮನೆ ಶಾಂತಿನಗರ, ಹರೇಕಳ, ಮಂಗಳೂರು

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀ ಕೆ. ಹೈಡ್ರೋಸ್ S/o ಕುಂಞಬ್ಯಾರಿ ಶಾಂತಿ ನಗರ, ಹರೇಕಳ, ಮಂಗಳೂರು.
2. ದಿ. ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಜಿ.ಎಚ್.ಎಸ್ ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ನಫೀಸ್ ಇವರು ತಮ್ಮ ಮಗನಾದ ಶ್ರೀ ಫರೂಖ್ ಇವರು 1ನೇ ಪ್ರತಿವಾದಿಗಳಲ್ಲಿ ಕ್ಲೀನರ್ /ಲೋಡರ್ ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 28.11.03 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್‌ಅರ್ಜಿ: ತಕರಾರು ಅರ್ಜಿಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಜಿ. ಆರ್. ಇಂಗಳೆ**

ಪಿ.ಆರ್. 453 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಮಂಗಳೂರು.

**FORM No:155**

**(Rule 329 of The Companies court Rules, 1959)**

**Members' Voluntary winding up**

**Name of the Company; RATHI LEASING LIMITED**

**Notice convening final meeting**

Notice is hereby given in pursuance of section 497 that a General Meeting of the members of the above-named company will be held at the registered office of the company at 'Bhavani', 337-H, 9th K Main, Hoshally, Vijayanagar, Bangalore-560 040 on the 7th Day of May 2004 at 10.00 A. M. for the purpose of having an account laid before them showing the manner in which the winding up has been conducted and the property of the company disposed of and of hearing any explanation that may be given

by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

**R. Ramesh**
Liquidator.

PD-22

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಡಿ:2 ಕಾನಪ:13:2004 ದಿನಾಂಕ: 4ನೇ ಫೆಬ್ರವರಿ 2004**

**ಅರ್ಜಿದಾರರು :** ಅರ್ಜುನ ಹರಿಸಂಬೋಜಿ ಸಾವಜಿ, ವಾಸ: ಹಿಟ್ಟಿನಹಳ್ಳಿ ತಾ: ಜಿಲ್ಲೆ ಬಿಜಾಪೂರ (ಇತರೆ ಒಬ್ಬರು).

**ವಿರುದ್ಧ**

**ಪ್ರತಿವಾದಿಗಳು :** 1. ಶ್ರೀಮತಿ ಆಶಾದೇವಿ ಬಿ. ಡಾಂಗೆ, ವಾಸ: ಮಾನೆಗಲ್ಲಿ, ಮಂಗಳವಾಡಾ ಜಿಲ್ಲೆ: ಸೊಲ್ಲಾಪೂರ.

2. ದಿ-ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿಮಿಟೆಡ್, ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಂಜಯ ಉರ್ಫ್ ಸಚಿನ್ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 12.11.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಅರ್ಜುನ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

ಪಿ.ಆರ್. 454

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:2 ಕಾನಪ:14:2004 ದಿನಾಂಕ: 4ನೇ ಫೆಬ್ರವರಿ 2004**

**ಅರ್ಜಿದಾರರು :** ಶ್ರೀಮತಿ ವಿಕ್ರಮದೇವಿ ಬಿಸಾನದಾಸ ರಜಪೂತ ವಾಸ: ಕುಲಾನಿ, ಪೊ:ಚಂದಪೂರ, ತಾ: ಪಾಲಮಪೂರ ಜಿಲ್ಲೆ, ಕಂಗದಾ ಹೊಸ ಹಿಮಾಚಲ ಪ್ರದೇಶ-176061

**ವಿರುದ್ಧ**

**ಪ್ರತಿವಾದಿಗಳು :** 1. ಅಶೋಕಕುಮಾರ ವೇದಪ್ರಕಾಶ್ ವಾಸ: ಸಿಡಬ್ಲ್ಯೂ-237, ಸಂಜಯಗಾಂಧಿ ಟ್ರಾನ್ಸ್‌ಪೋರ್ಟ್ ನಗರ, ನ್ಯೂದಿಲ್ಲಿ.

2. ದಿ-ಬ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂಪನಿ. ಲಿಮಿಟೆಡ್, ನ್ಯೂದಿಲ್ಲಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಿಸಾನದಾಸ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 6.2.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ: ವಿಕ್ರಮದೇವಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

ಪಿ.ಆರ್. 455

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:2 ಕಾನಪ:17:2004 ದಿನಾಂಕ: 4ನೇ ಫೆಬ್ರವರಿ 2004**

**ಅರ್ಜಿದಾರರು :** ಸಾಬಕ್ಕಾ ದ್ಯಾವಪ್ಪಾ ಪೂಜೇರಿ ವಾಸ: ತಿಕೋಟಾ ತಾ: ಜಿಲ್ಲೆ: ಬಿಜಾಪೂರ (ಹಾಗೂ ಇತರೆ 3 ಜನರು)

**ವಿರುದ್ಧ**

**ಪ್ರತಿವಾದಿಗಳು :** 1. ಶ್ರೀ ಬಸವರಾಜು ಸಾಬು ಮೆಟಗುಡ್ಡ ವಾಸ: ತಿಕೋಟಾ ತಾ: ಜಿಲ್ಲೆ: ಬಿಜಾಪೂರ.

2. ದಿ-ಬ್ರ್ಯಾಂಚ್ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂಪನಿ ಲಿ., ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಪ್ರಕಾಶ್ ಉರ್ಫ್ ಹನುಮಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 3.12.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಸಾಬಕ್ಕಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 456 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಬಿ:2 ಕಾನಪ:20:2004 ದಿನಾಂಕ: 12ನೇ ಫೆಬ್ರವರಿ 2004**

**ಅರ್ಜಿದಾರರು :** ಶ್ರೀಮತಿ ಶ್ಯಾಲನ ವಿಲಾಸ ಚವ್ಹಾಣ, ವಾಸ: ಬಾಬಾನಗರ, ತಾ: ಜಿ: ಬಿಜಾಪುರ, (ಹಾಗೂ ಇತರೆ 2 ಜನರು).

**ವಿರುದ್ಧ**

**ಪ್ರತಿವಾದಿಗಳು :** 1. ಶ್ರೀಮತಿ ಬೀನಾ ಸಂಜಯ ಕಾಳಗೆ, ವಾಸ: ಕಾಳಗೆ ಕಾಂಪ್ಲೆಕ್ಸ್ ಜೆತ್ತ, ಜಿಲ್ಲೆ: ಸಾಂಗಲಿ.

2. ದಿ-ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ., ಸಾಂಗಲಿ, ಬಿಜಾಪೂರ.

(ಎಸ್.ಎಸ್.ಫ್ರಂಟ ರೋಡ್, ಬಿಜಾಪೂರ ಇವರ ಮುಖಾಂತರ)

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಿಲಾಸ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 24.10.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಶ್ಯಾಲನ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 457 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಮಪ್ರ:96:2004 ದಿನಾಂಕ: 17ನೇ ಮಾರ್ಚ್ 2004**

**ಅರ್ಜಿದಾರರು :** 1. ಶ್ರೀಮತಿ ಶಕುಂತಲಾ ಗಂಡ ಪರ್ವತಗೌಡ ಕಾನಪ್ಪಗೌಡರ

2. ಪರ್ವತಗೌಡ ತಾ: ಶಿದ್ದನಗೌಡ ಕಾನಪ್ಪಗೌಡರ ಸಾ: ಗದಗ ಹಾಲಿವಸ್ತಿ ಕೊಪ್ಪಳ

**ವಿರುದ್ಧ**

**ಪ್ರತಿವಾದಿಗಳು :** 1. ಪಾಲುದಾರ ಶಿದ್ದಲಿಂಗೇಶ್ವರ ಎಂಟರ್‌ಪ್ರೈಸಸ್ ಪಿ.ಬಿ. ರೋಡ್ ಕೆನರಾಬ್ಯಾಂಕ್ ಎದುರುಗಡೆ, ವಾಹನ ಸಂಖ್ಯೆ: ನಂ. ಕೆಎ26:4777.

2. ದಿ. ಡಿವಿಜನಲ್ ಮ್ಯಾನೇಜರ್, ಆಫೀಸ್ ನ್ಯಾಶನಲ್ ಇನ್ಸೂರೆನ್ಸ್ ಕಂಪನಿ ಲಿ., ಮಿನಿ ವಿಧಾನಸೌಧ ಸ್ಟೇಶನ್ ರೋಡ್, ಗುಲಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ:ಗಾಯ: ಶ್ರೀ ಸಂತೋಷ ತಾ: ಪರ್ವತಗೌಡ ಕಾನಪ್ಪಗೌಡರ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 13.11.2003 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ

ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಅರ್ಜಿದಾರರ 1ಮತ್ತು 2 ರವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 458

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

### ಅಧಿಸೂಚನೆ

### ಸಂ:ಅಮೋ:ವಾಹನ: 32:03-04 ದಿನಾಂಕ: 15ನೇ ಮಾರ್ಚ್ 2004

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | Hero Honda, KA-17-Q-8704 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 105/2003-04 | ಕಾಣಿಸುತ್ತಿಲ್ಲ | 02C21C30835 |
| 2 | Suzuki Byke, KA-15-E-5187 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 117/2003-04 | 1512 ಎಂ627673 | 1512 ಎಫ್ 583564 |
| 3 | Bajaj Scooter, KA-19-E-3983 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 117/2003-04 | ಕಾಣಿಸುತ್ತಿಲ್ಲ | ಕಾಣಿಸುತ್ತಿಲ್ಲ |
| 4 | Maruthi Car, KA-01-P-2705 | ಸಾಗರ ವಲಯದ ಅ.ಮೊ. ಸಂಖ್ಯೆ 143/2003-04 | 319660 | 234932 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 459

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ನಡವಳಿಕೆಗಳು

### ಕ್ರಮಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:47:ಎಲ್‌ಎಂಸಿ: 1998-99 ದಿನಾಂಕ: 18ನೇ ಮಾರ್ಚ್ 2004

**ವಿಷಯ :** ಹರಿಜನ ಆಗ್ರೋಬೇಸ್ಡ್ ವಿವಿಧೋದ್ದೇಶ ಮತ್ತು ಗ್ರಾನೈಟ್ ಸಹಕಾರ ಸಂಘ ನಿಯಮಿತ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇದರ ನೋಂದಣಿ ಸಂಖ್ಯೆ ರದ್ದತಿ ಬಗ್ಗೆ.

**ಉಲ್ಲೇಖ :**
1. ಜೆಆರ್‌ಬಿ: ಸಮಾಪನೆ:47:1998-99 ದಿನಾಂಕ: 21.4.2001.
2. ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಬಿ-2 ಸಮಾಪನೆ:127:03-04 ದಿನಾಂಕ:17.2.2004

**ಪ್ರಸ್ತಾವನೆ:**

ಕನಕಪುರ ತಾಲ್ಲೂಕು ಹರಿಜನ ಆಗ್ರೋಬೇಸ್ಡ್ ವಿವಿಧೋದ್ದೇಶ ಮತ್ತು ಗ್ರಾನೈಟ್ ಸಹಕಾರ ಸಂಘ ನಿಯಮಿತ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಸಹಕಾರ ಸಂಘವು ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ನೋಂದಣಿ: 11463:90-91 ದಿನಾಂಕ: 02.05.1990 ರಲ್ಲಿ ನೋಂದಣಿಯಾಗಿರುತ್ತದೆ. ಸಂಘವು ತನ್ನ ನೋಂದಣಿಯಾದ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದ ಕಾರಣ ಸಂಘವನ್ನು ಉಲ್ಲೇಖ (1)ರ ಆದೇಶದಲ್ಲಿ ಕಲಂ 72(ಬಿ) ಅನ್ವಯ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಕನಕಪುರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಂಘವು ನೋಂದಣಿಯಾದಾಗಿನಿಂದ ಯಾವುದೇ ಕಾರ್ಯನಿರ್ವಹಿಸದೇ ಇರುವುದರಿಂದ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಸಂಘವು ನೋಂದಾಯಿತ ವಿಳಾಸದಲ್ಲಿ ಕಾರ್ಯನಿರ್ವಹಿಸದಿರುವುದರಿಂದ ಯಾವುದೇ ದಾಖಲೆಗಳು ಲಭ್ಯವಾಗಿರುವುದಿಲ್ಲ. ಸಂಘವು ಕಾರ್ಯಾರಂಭ ಮಾಡುವ ಯಾವುದೇ ಸೂಚನೆಯಿಲ್ಲವಾದ್ದರಿಂದ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಸಹಕಾರ ಸಂಘಗಳ ಜಂಟಿ ನಿಬಂಧಕರನ್ನು ಕೋರಲು ಸಂಘದ ಸಮಾಪನಾಧಿಕಾರಿಯವರು ದಿನಾಂಕ: 26.12.2003ರ ಸಭೆಯಲ್ಲಿ ಠರಾವು ಪಾಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಇವರ ಪ್ರಕಾರ ಸಂಘವು ಸದಸ್ಯರಿಂದ ಸಂಗ್ರಹಿಸಿದ್ದ ಷೇರು ಹಣ ರೂ.40,000 ಗಳ ಬಗ್ಗೆ ದಾಖಲೆಗಳು ಲಭ್ಯವಾಗಿಲ್ಲ. ಈ ಹಣವನ್ನು ಕರ್ನಾಟಕ ರಾಜ್ಯ ಗಣಿವಿಜ್ಞಾನ ಇಲಾಖೆಗೆ ಗ್ರಾನೈಟ್ ಕಾಮಗಾರಿಗಾಗಿ ಪರವಾನಗಿ ಪಡೆಯಲು ಪಾವತಿಸಿದ್ದು, ಪರವಾನಗಿ ದೊರೆತಿರುವುದಿಲ್ಲ. ಈ ಬಗ್ಗೆ ಹಣ ವಾಪಾಸ್ಸು ಬಂದಿರುವ ಬಗ್ಗೆ ಯಾವುದೇ ದಾಖಲಾತಿಗಳು ಲಭ್ಯವಾಗಿರುವುದಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಉಪನಿಬಂಧಕರವರು ಕೋರಿದ್ದಾರೆ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಲಾಗಿ, ಸಂಘವನ್ನು ಸಮಾಪನಾ ಹಂತದಲ್ಲಿ ಮುಂದುವರೆಸುವುದರಿಂದ ಯಾರಿಗೂ ಪ್ರಯೋಜನಕಾರಿಯಲ್ಲವೆಂದು ಮನಗಂಡು, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001 ದಿನಾಂಕ: 21.11.2001 ಹಾಗೂ ಸಿಎಂಡಬ್ಲ್ಯೂ:70:ಸಿಎಲ್ಎಂ: 2003 ದಿನಾಂಕ: 27.11.03 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಕನಕಪುರ ತಾಲ್ಲೂಕು ಹರಿಜನ ಆಗ್ರೋ ಬೇಸ್ಡ್ ವಿವಿಧೋದ್ದೇಶ ಮತ್ತು ಗ್ರಾನೈಟ್ ಸಹಕಾರ ಸಂಘ ನಿಯಮಿತ, ಕನಕಪುರ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಉಪನಿಬೆಂಗ್ರಾ: 11463:90-91 ದಿನಾಂಕ: 02.05.1990 ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸಂಘವು ತನ್ನ ಸಂಪೂರ್ಣ ಅಸ್ಥಿತ್ವವನ್ನು ಕಳೆದುಕೊಂಡಿದ್ದು, ವಿಸರ್ಜಿಸಲ್ಪಟ್ಟಿದೆ ಎಂದು ಪರಿಗಣಿಸತಕ್ಕದ್ದು.

ಈ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಇವರ ಕಛೇರಿಯಲ್ಲಿ ನಿಯಮಾನುಸಾರ 03 ವರ್ಷಗಳ ಅವಧಿಗೆ ಕಾಯ್ದಿರಿಸಿ ನಂತರ ರದ್ದುಪಡಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 17ನೇ ಮಾರ್ಚ್ 2004 ರಂದು ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 460 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಕೆಗಳು**

**ಕ್ರಮಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:40:ಎಲ್ಎಂಸಿ: 1998-99 ದಿನಾಂಕ: 17ನೇ ಮಾರ್ಚ್ 2004**

**ವಿಷಯ :** ಸಮಾಪನೆಯಲ್ಲಿರುವ ದೇವನಹಳ್ಳಿ ತಾಲ್ಲೂಕು ಗಂಗಾ ಪರಮೇಶ್ವರಿ ಮೀನುಗಾರರ ಸಹಕಾರ ಸಂಘ ನಿಯಮಿತ ದೇವನಹಳ್ಳಿ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಜೆಆರ್‌ಬಿ: ಸಮಾಪನೆ:40:1998-99 ದಿನಾಂಕ: 18.6.2001.
2. ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಬಿಆರ್ ಸಮಾಪನೆ:2003-04 ದಿನಾಂಕ:17.2.2004

**ಪ್ರಸ್ತಾವನೆ:**

ದೇವನಹಳ್ಳಿ ತಾಲ್ಲೂಕು ಗಂಗಾಪರಮೇಶ್ವರಿ ಮೀನುಗಾರರ ಸಹಕಾರ ಸಂಘ ನಿಯಮಿತ, ದೇವನಹಳ್ಳಿ ಈ ಸಹಕಾರ ಸಂಘವು ಸಂಖ್ಯೆ:ಡಿಆರ್‌ಬಿ:ಆರ್‌ಜಿಎನ್:11459:87-88 ದಿನಾಂಕ: 21.03.1988 ರಲ್ಲಿ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು 1991 ರಿಂದ ತನ್ನ ಉಪನಿಯಮಗಳ ರೀತ್ಯಾ ಕಾರ್ಯನಿರ್ವಹಿಸದಿರುವುದರಿಂದ ಸಂಘವನ್ನು ಉಲ್ಲೇಖ (1)ರ ಆದೇಶದ ರೀತ್ಯಾ ಕಲಂ 72(2) (ಬಿ) ಅನ್ವಯ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ದೇವನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಸಂಘದ 1996-97ನೇ ಸಾಲಿನ ಆಸ್ತಿ-ಜವಾಬ್ದಾರಿ ತಃಖ್ತೆಯ ಅನುಸಾರ ಸರ್ಕಾರದ ಷೇರುಧನ ರೂ.10,000 ಗಳನ್ನು ಮರುಪಾವತಿಸಬೇಕಾಗಿದ್ದು, ಇದನ್ನು ಚಲನ್ ಸಂಖ್ಯೆ: 63:12 ದಿನಾಂಕ: 28.3.2002 ರಲ್ಲಿ ಸರ್ಕಾರಕ್ಕೆ ಮರುಪಾವತಿ ಮಾಡಲಾಗಿದೆ. ಸದಸ್ಯರ ಷೇರು ಬಂಡವಾಳ ರೂ.1,715 ಮರುಪಾವತಿಸಲು ಪೂರಕ ದಾಖಲಾತಿಗಳ ಕೊರತೆಯಿಂದಾಗಿ ಮರುಪಾವತಿಸಲು ಸಾಧ್ಯವಾಗಿಲ್ಲವೆಂದೂ, ಈ ಹಣವನ್ನು ಬೆಂಗಳೂರು ಡಿ.ಸಿ.ಸಿ. ಬ್ಯಾಂಕಿನ ಉಪನಿಬಂಧಕರ ಪಿ.ಡಿ. ಖಾತೆ ಸಂಖ್ಯೆ: 321:12 ಎ ಇದಕ್ಕೆ ಪಾವತಿಸಲಾಗಿದೆಯೆಂದು ಸಹಕಾರ ಸಂಘಗಳ ಉಪನಿಬಂಧಕರವರು ಉಲ್ಲೇಖ (1)ರಲ್ಲಿ ವರದಿಸಿದ್ದಾರೆ. ಹಾಗೂ ಉಳಿದ ಆಸ್ತಿ-ಜವಾಬ್ದಾರಿಗಳನ್ನು ತೀರುವಳಿ ಮಾಡಲು ರಹವಿಲ್ಲದ ಕಾರಣ ಸಮಾಪನಾಧಿಕಾರಿಯವರು ದಿನಾಂಕ: 27.1.2004 ರಲ್ಲಿನ ಸಭೆಯಲ್ಲಿ ಹೊಂದಾಣಿಕೆ ಲೆಕ್ಕದ ಮುಖಾಂತರ ಅಥಾವೆ ಪತ್ರಿಕೆಯನ್ನು ಶೂನ್ಯಗೊಳಿಸಲು ತೀರ್ಮಾನ ಕೈಗೊಂಡಿರುತ್ತಾರೆ. ಈ ಅಂಶಗಳ ಹಿನ್ನೆಲೆಯಲ್ಲಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕಾಗಿ ಸಹಕಾರ ಸಂಘಗಳ ಉಪನಿಬಂಧಕರವರು ಕೋರಿದ್ದಾರೆ.

ಸರ್ಕಾರದ ಷೇರುಧನ ಪೂರ್ಣವಾಗಿ ಮರುಪಾವತಿಯಾಗಿರುವುದರಿಂದ ಹಾಗೂ ಸಂಘವನ್ನು ಸಮಾಪನಾ ಹಂತದಲ್ಲಿ ಮುಂದುವರೆಸುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲದಿರುವುದನ್ನು ಮನಗಂಡು ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ತೀರ್ಮಾನಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ: 2001 ದಿನಾಂಕ: 21.11.2001 ಹಾಗೂ ಸಿಎಂಡಬ್ಲ್ಯೂ:70:ಸಿಎಲ್‌ಎಂ: 2003 ದಿನಾಂಕ: 27.11.2003 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ದೇವನಹಳ್ಳಿ ತಾಲ್ಲೂಕು ಗಂಗಾಪರಮೇಶ್ವರಿ ಮೀನುಗಾರರ ಸಹಕಾರ ಸಂಘ ನಿಯಮಿತ, ದೇವನಹಳ್ಳಿ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಬಿಆರ್:ಆರ್‌ಜಿಎನ್: 11459:87-88 ದಿನಾಂಕ: 21.3.1988ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ಅಸ್ತಿತ್ವದಲ್ಲಿರುವುದಿಲ್ಲವೆಂದೂ, ವಿಸರ್ಜಿಸಲ್ಪಟ್ಟಿದೆಯೆಂದು ಪರಿಗಣಿಸತಕ್ಕದ್ದು.

ಈ ಸಂಘದ ದಾಖಲಾತಿಗಳನ್ನು ನಿಯಮಾನುಸಾರ 3 ವರ್ಷಗಳವರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರ ಕಛೇರಿಯಲ್ಲಿ ಕಾಯ್ದಿರಿಸಿ ನಂತರ ನಾಶಪಡಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 17ನೇ ಮಾರ್ಚ್ 2004 ರಂದು ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 461 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಚಾಮರಾಜಪೇಟೆ, ಬೆಂಗಳೂರು ರವರ ನಡವಳಿಕೆಗಳು**

**ಕ್ರಮಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:37:ಎಲ್‌ಎಂಸಿ: 1997-98 ದಿನಾಂಕ: 17ನೇ ಮಾರ್ಚ್ 2004**

**ವಿಷಯ :** ಸಮಾಪನೆಯಲ್ಲಿರುವ ಹೊಸಕೋಟೆ ತಾಲ್ಲೂಕು ಹರಿಜನ-ಗಿರಿಜನ ಗೃಹನಿರ್ಮಾಣ ಸಹಕಾರ ಸಂಘ ನಿ., ಹೊಸಕೋಟೆ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಜೆಆರ್‌ಬಿ: ಎಲ್‌ಕ್ಯೂಡಿ: 37:98-99 ದಿನಾಂಕ: 29.9.1998.
2. ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಬಿಆರ್:ಸಮಾಪನೆ: 125:2003-04 ದಿನಾಂಕ: 17.2.2004.

**ಪ್ರಸ್ತಾವನೆ:**

ಹೊಸಕೋಟೆ ತಾಲ್ಲೂಕು ಹರಿಜನ-ಗಿರಿಜನ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಹಕಾರ ಸಂಘವು ಡಿವೈಆರ್-71: ದಿನಾಂಕ: 2.3.1963 ರನ್ವಯ ನೋಂದಾಯಿತವಾಗಿದ್ದು, ತನ್ನ ನೋಂದಾವಣೆಯ ಉದ್ದೇಶಗಳಿಗೆ ಹಾಗೂ ಸಹಕಾರಿ ಕಾಯ್ದೆ ನಿಯಮಗಳಿಗನುಗುಣವಾಗಿ ಕಾರ್ಯನಿರ್ವಹಿಸಿದ ಕಾರಣ ಸಂಘವನ್ನು ಉಲ್ಲೇಖ (1)ರ ರೀತ್ಯಾ ಕಲಂ 72(2)(ಬಿ) ಅನ್ವಯ ಸಮಾಪನೆಗೊಳಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸಕೋಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಸಂಘದ ಸದಸ್ಯರಿಂದ ಬರಬೇಕಾದ ಸಾಲ ರೂ.2,15,192-39 ಗಳು ಹಾಗೂ ಸಂಘವು ಕರ್ನಾಟಕ ರಾಜ್ಯ ಸಹಕಾರ ಹರಿಜನ-ಗಿರಿಜನ ಗೃಹನಿರ್ಮಾಣ ನಿಗಮ ನಿ., ಬೆಂಗಳೂರು ಈ ಸಂಸ್ಥೆಗೆ ಮರುಪಾವತಿಸಬೇಕಾದ ಸಾಲ ರೂ. 2,21,805-00 ಗಳನ್ನು ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:35:ಸಿಹೆಚ್‌ಎಸ್: 88: ಬೆಂಗಳೂರು ದಿನಾಂಕ: 10.1.1989ರಲ್ಲಿ ಮನ್ನಾ ಮಾಡಲಾಗಿರುತ್ತದೆ. ಸಂಘದ ಇತರೆ ಆಸ್ತಿ-ಜವಾಬ್ದಾರಿಗಳನ್ನು ವಿಲೇ ಮಾಡಲು ಯಾವುದೇ ರಹವಿಲ್ಲದ ಕಾರಣ ಹೊಂದಾಣಿಕೆ ಲೆಕ್ಕದ ಮುಖಾಂತರ ವಸೂಲಾಗಬೇಕಾದ ಆಸ್ತಿಗಳನ್ನು ನಷ್ಟದ ಖಾತೆಗೆ ಮತ್ತು ತೀರಿಸಬೇಕಾದ ಜವಾಬ್ದಾರಿಗಳನ್ನು ಲಾಭದ ಖಾತೆಗೆ ವರ್ಗಾಯಿಸಲು ಸಂಘದ

ಸಮಾಪನಾಧಿಕಾರಿಯವರು ದಿನಾಂಕ: 20.1.2004ರ ಸಭೆಯಲ್ಲಿ ತೀರ್ಮಾನ ಕೈಗೊಂಡಿರುತ್ತಾರೆ. ಹಾಗೂ ಶೂನ್ಯ ಅಥಾವೆ ಪತ್ರಿಕೆಯನ್ನು ತಯಾರಿಸಿ ಸಲ್ಲಿಸಿರುತ್ತಾರೆ. ಈ ಅಂಶದ ಹಿನ್ನೆಲೆಯಲ್ಲಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಕೋರಿದ್ದಾರೆ.

ಸಂಘದಲ್ಲಿನ ಸರ್ಕಾರದ ವಿನಿಯೋಗಗಳು ಮನ್ನಾ ಆಗಿರುವ ಹಾಗೂ ಇತರೆ ಆಸ್ತಿ-ಜವಾಬ್ದಾರಿಗಳನ್ನು ತೀರಿಸಲು ರಹವಿಲ್ಲದಿರುವ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನಾ ಹಂತದಲ್ಲಿಯೇ ಮುಂದುವರೆಸುವುದರಿಂದ ಸದಸ್ಯರಿಗಾಗಲೀ-ಸಾರ್ವಜನಿಕರಿಗಾಗಲೀ ಯಾವ ಪ್ರಯೋಜನವೂ ಇಲ್ಲವೆಂದು ಮನಗಂಡು, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001 ಹಾಗೂ ಸಿಎಂಡಬ್ಲ್ಯೂ:70:ಸಿಎಲ್ಎಂ:2003 ದಿನಾಂಕ: 27.11.2003 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಹೊಸಕೋಟೆ ತಾಲ್ಲೂಕು ಹರಿಜನ-ಗಿರಿಜನ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಹೊಸಕೋಟೆ ಈ ಸಂಘದ ನೋಂದಣಿ ಸಂಖ್ಯೆ: ಡಿವೈಆರ್:71: ದಿನಾಂಕ: 2.3.1963ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಸಂಪೂರ್ಣ ಅಸ್ತಿತ್ವವನ್ನು ಕಳೆದುಕೊಂಡಿದೆಯೆಂದೂ ಸಂಘವು ವಿಸರ್ಜಿತವಾಗಿಯೆಂದೂ ಪರಿಗಣಿಸತಕ್ಕದ್ದು.

ಈ ಸಂಘದ ದಾಖಲಾತಿಗಳನ್ನು ನಿಯಮಾನುಸಾರ 03 ವರ್ಷಗಳವರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸಿಡತಕ್ಕದ್ದು. ನಂತರ ನಾಶಪಡಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 17ನೇ ಮಾರ್ಚ್ 2004 ರಂದು ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 462 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ**

**ಸಂಖ್ಯೆ:ಎ2:ಕ್ರೈಂನಂ:ಅಮೊಸಂ:156:96:ಸಿಆರ್-21/03-04 ದಿನಾಂಕ: 16ನೇ ಜನವರಿ 2004**

ದಾವಣಗೆರೆ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀ ಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ದಾವಣಗೆರೆ ಅರಣ್ಯ ವಿಭಾಗದ ಸಿಬ್ಬಂದಿ ವರ್ಗದವರು ಹಾಗೂ ಪೊಲೀಸ್ ಇಲಾಖೆಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ವಿವರ | ಪೊಲೀಸ್ ಮೊಕದ್ದಮೆ ಸಂಖ್ಯೆ | ವಾಹನದ ಸಂಖ್ಯೆ | ಎಂಜಿನ್ ಸಂಖ್ಯೆ | ಚಾಸ್ಸಿಸ್ ಸಂಖ್ಯೆ |
|---|---|---|---|---|---|
| 1 | ಅಂಬಾಸಿಡರ್‌ಕಾರು | 156/96 | ಸಿಎನ್ಎಂ-1509 | OER 15579 | |

ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಬಿ. ಗೋಪಾಲನಾಯ್ಕ್**

ಪಿ.ಆರ್. 463 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ**

**ಅಧಿಭಾರ ಅರ್ಜಿ ಸಂಖ್ಯೆ:ಡಿಆರ್‌ಟಿ:8:2002-03**

**ವಾದಿ :** ಕಾರ್ಯದರ್ಶಿ, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತಿಪಟೂರು

**ವಿರುದ್ಧ**

**ಪ್ರತಿವಾದಿಗಳು :** 1) ಶ್ರೀ ಕೆಂಪೇಗೌಡ ಬಿನ್ ಲೇಟ್ ರಂಗೇಗೌಡ, ಅಧೀಕ್ಷಕರು, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಕೇಂದ್ರ ಕಛೇರಿ, ಟಿಪ್ಪು ಸುಲ್ತಾನ್ ಅರಮನೆ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18.

**ಕನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಜಪ್ತಿ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69 ರ ಪ್ರಕಾರ ಈ ನ್ಯಾಯಾಲಯದ ಮುಂದೆ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಪ್ರತಿವಾದಿಗಳಿಂದ 12,400 ರೂ.ಗಳನ್ನು ದುರುಪಯೋಗದ ದಿನಾಂಕದಿಂದ ಶೇಕಡ 18ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ಅಧಿಭಾರ ಅರ್ಜಿಯನ್ನು ಡಿಆರ್‌ಟಿ:8:2000-01 ರ ಅನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ಅಧಿಭಾರ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ದಿನಾಂಕ: 20.2.2004 ರಂದು ಅರ್ಜಿಯನ್ನು ಸಲ್ಲಿಸಿ ಪ್ರತಿವಾದಿಯವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯವರು ಈ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹ ಇಲ್ಲದೆ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ವಾದಿಯ ಅಧಿಬಾರ ಅರ್ಜಿ ಮತ್ತು ಸದರಿ ಕಾಯಿದೆ. ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಯವರು ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ/ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ಮೇಲ್ಕಂಡ ಪರಿಸ್ಥಿತಿ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯುವ ಬಗ್ಗೆ ಇಚ್ಛಿಸಿದಲ್ಲಿ ರೂ. 12,400/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 18.4.2004 ರ ಒಳಗಾಗಿ ಅಧಿಕೃತ ಚಲನ್ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದ ಒಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್ ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್**

ತಿಪಟೂರು ಟೌನ್ ಸಿ ವಿಭಾಗದ ಕಂಚಾಘಟ್ಟ ಬಡಾವಣೆ ಮುನಿಸಿಪಲ್ ಖಾತೆ ನಂ. 46/2/4660 ಆಸ್ತಿ ನಂ. 465 ವುಳ್ಳ 30X40 ಅಡಿಗಳ ನಿವೇಶನ ಇದಕ್ಕೆ ಚಕ್ಕುಬಂದಿ

ಪೂರ್ವಕ್ಕೆ: ಸೈಟ್ ನಂ.3
ಪಶ್ಚಿಮಕ್ಕೆ: ಸೈಟ್ ನಂ.1
ಉತ್ತರಕ್ಕೆ: ಸರ್ವೆ ನಂ.3
ದಕ್ಷಿಣಕ್ಕೆ: 20 ಅಡಿ ರಸ್ತೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 17.3.2004 ರಂದು ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 464 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ**

**ಅಧಿಭಾರ ಅರ್ಜಿ ಸಂಖ್ಯೆ:ಡಿಆರ್‌ಟಿ:7:2002-03**

**ವಾದಿ :** ಕಾರ್ಯದರ್ಶಿ, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತಿಪಟೂರು

**ವಿರುದ್ಧ**

**ಪ್ರತಿವಾದಿಗಳು :** 1) ಶ್ರೀ ಮಲ್ಲಿಕಾರ್ಜುನ ಮೂರ್ತಿ ಬಿನ್ ಹುಚ್ಚಪ್ಪ ಮೇಲ್ವಿಚಾರಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಶಿರಾ

**ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಜಪ್ತಿ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69 ರ ಪ್ರಕಾರ ಈ ನ್ಯಾಯಾಲಯದ ಮುಂದೆ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಪ್ರತಿವಾದಿಗಳಿಂದ 81,600 ರೂ.ಗಳನ್ನು ದುರುಪಯೋಗದ ದಿನಾಂಕದಿಂದ ಶೇಕಡ 18ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ಅಧಿಭಾರ ಅರ್ಜಿಯನ್ನು ಡಿಆರ್‌ಟಿ:7:2000-01 ರ ಅನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ಅಧಿಭಾರ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ದಿನಾಂಕ: 20.2.2004 ರಂದು ಅರ್ಜಿಯನ್ನು ಸಲ್ಲಿಸಿ ಪ್ರತಿವಾದಿಯವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯವರು ಈ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹ ಇಲ್ಲದೆ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ವಾದಿಯ ಅಧಿಭಾರ ಅರ್ಜಿ ಮತ್ತು ಸದರಿ ಕಾಯಿದೆ. ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಯವರು ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ/ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ಮೇಲ್ಕಂಡ ಪರಿಸ್ಥಿತಿ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಮೊಹಮದ್ ಸಲೀಂ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯುವ ಬಗ್ಗೆ ಇಚ್ಛಿಸಿದಲ್ಲಿ ರೂ. 81,600/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 18.4.2004 ರ ಒಳಗಾಗಿ ಅಧಿಕೃತ ಚಲನ್ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದ ಒಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್ ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

| ಕ್ರ. ಸಂ. | ಗ್ರಾಮ | ಖಾತೆದಾರನ ಹೆಸರು | ಖಾತೆ ನಂ | ಸ್ವತ್ತಿನ ವಿವರ | ಕಂದಾಯ |
|---|---|---|---|---|---|
| 1 | ಮತಿಘಟ್ಟ, ಹಂದನಕೆರೆ ಹೋಬಳಿ, ಚಿ.ನಾ.ಹಳ್ಳಿ ತಾ: | ಮಲ್ಲಿಕಾರ್ಜುನ ಮೂರ್ತಿ | ಸರ್ವೆನಂ.59/5 | 4 ಎಕರೆ ಬಾಗಾಯ್ತು | 5-00 |
| **ಚಕ್ಕುಬಂದಿ:** | | ಪೂರ್ವಕ್ಕೆ : ಸಿದ್ದರಾಮಯ್ಯ<br>ಪಶ್ಚಿಮಕ್ಕೆ : ಶಿವಲಿಂಗಯ್ಯ<br>ಉತ್ತರಕ್ಕೆ : ಕಾಳಾಚಾರ್<br>ದಕ್ಷಿಣಕ್ಕೆ : ಗುರುಮೂರ್ತಿ | | | |
| | ತಿಪಟೂರು ಟೌನ್ ಸಿ. ವಿಭಾಗ | ಮಲ್ಲಿಕಾರ್ಜುನ ಮೂರ್ತಿ | ಖಾತೆ ನಂ.4726/524 | 40x30 ಅಡಿಗಳ ನಿವೇಶನ | 12-00 |
| **ಚಕ್ಕುಬಂದಿ:** | | ಪೂರ್ವಕ್ಕೆ : ಸೈಟ್ ನಂ. 2<br>ಪಶ್ಚಿಮಕ್ಕೆ : ಕಾಲೋನಿ ಜಾಗ<br>ಉತ್ತರಕ್ಕೆ : ಸೈಟ್ ನಂ. 3<br>ದಕ್ಷಿಣಕ್ಕೆ : 20 ಅಡಿ ರಸ್ತೆ | | | |

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 17.3.2004 ರಂದು ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 465 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ನಂ: ಡಿಆರ್‌ಟಿ:ಡಿಎಲ್‌ಎಸ್:584:ಎಲ್‌ಕ್ಯೂಡಿ:53:2000-01 ದಿನಾಂಕ: 18ನೇ ಮಾರ್ಚ್ 2004**

**ವಿಷಯ :** ಮಾರುತಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ ತುಮಕೂರು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32:ಲೆಪ:606:2000-01 ದಿನಾಂಕ: 14.12.2001.
2. ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್: 584:ಎಲ್‌ಕ್ಯೂಡಿ:53:2001-02 ದಿನಾಂಕ: 28.2.2002.
3. ಸಮಾಪನೆ ಆದೇಶ ಡಿಆರ್‌ಟಿ:ಡಿಎಲ್‌ಎಸ್:584:ಎಲ್‌ಕ್ಯೂಡಿ:53:2001-02 ದಿನಾಂಕ:29.8.2002
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32:ಲೆಪ-606:2000-01 ದಿನಾಂಕ: 15.3.2004

**ಪ್ರಸ್ತಾವನೆ:**

ಮಾರುತಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ ತುಮಕೂರು ತಾಲ್ಲೂಕು, ತುಮಕೂರು ಈ ಸಂಘವು ನೋಂದಣಿ ಸಂಖ್ಯೆ: ಎಆರ್-32:ಆರ್‌ಸಿಎಸ್:24511:98-99 ದಿನಾಂಕ: 8.6.1998 ಆಗಿದ್ದು ಸದರಿ ಸಂಘದ ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 14.12.2001 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ(2) ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ(3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಪತ್ರದಲ್ಲಿ ತಿಳಿಸಿರುವಂತೆ ಸಂಘದಲ್ಲಿ ಯಾವುದೇ ವ್ಯವಹಾರ ನಡೆದಿರುವುದಿಲ್ಲ ವಾದ್ದರಿಂದ ಸಂಘದ ಲೆಕ್ಕ ಪರಿಶೋಧನೆ ಆಗಿರುವುದಿಲ್ಲ ಈ ಬಗ್ಗೆ ದಿನಾಂಕ: 5.3.2004 ರ ತುಮಕೂರು ಮಾಧ್ಯಮ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ 7 ದಿನಗಳ ಕಾಲಾವಕಾಶ ನೀಡಲಾಗಿದ್ದು ನೀಡಿದ್ದ ಕಾಲಾವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಂದಿಲ್ಲವಾದ್ದರಿಂದ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿದ್ದು, ಸದರಿ ಪ್ರಸ್ತಾವೆಯನ್ನು ಉಲ್ಲೇಖ (4)ರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಸಲ್ಲಿಸಿರುತ್ತಾರೆ. ಪ್ರಯುಕ್ತ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮಾರುತಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ತುಮಕೂರು ತಾಲ್ಲೂಕು, ತುಮಕೂರು ಇದರ ನೋಂದಣಿ ಸಂಖ್ಯೆ:ಎಆರ್-32: ಆರ್‌ಸಿಎಸ್:24511:98-99, ದಿನಾಂಕ:8.6.1998 ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯ್ದೆ 1959 ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 18.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 466 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ**

**ಅಧಿಭಾರ ಅರ್ಜಿ ಸಂಖ್ಯೆ:ಡಿಆರ್‌ಟಿ:5:2002-03**

**ವಾದಿ :** ಕಾರ್ಯದರ್ಶಿ, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ತಿಪಟೂರು.

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀಮತಿ ಪದ್ಮಾವತಿ ಕೋಂ ಲೇಟ್ ಪಿ. ಚೌಡಯ್ಯ, ರಾಘವೇಂದ್ರ ನಿಲಯ, ಡೋರ್ ನಂ. 3877, ಹಳೇ ಆರ್‌ಟಿಓ ಕಛೇರಿ ಹತ್ತಿರ, ಅಯ್ಯಪ್ಪ ದೇವಸ್ಥಾನದ ಹಿಂಭಾಗ, ದಾವಣಗೆರೆ.
2. ಶ್ರೀ ಪಿ. ಕುಮಾರಸ್ವಾಮಿ ಬಿನ್ ಲೇಟ್ ಪಿ. ಚೌಡಯ್ಯ, ರಾಘವೇಂದ್ರ ನಿಲಯ, ಡೋರ್ ನಂ. 3877 ಹಳೇ ಆರ್‌ಟಿಓ ಕಛೇರಿ ಹತ್ತಿರ, ಅಯ್ಯಪ್ಪ ದೇವಸ್ಥಾನದ ಹಿಂಭಾಗ, ದಾವಣಗೆರೆ.

**ಕರ್ನಾಟಕ ಸಹಕಾರ ಸಂಘಗಳ ಕಾಯಿಗೆ 1959ರ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಜಪ್ತಿ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು ಕನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69ರ ಪ್ರಕಾರ ಈ ನ್ಯಾಯಾಲಯದ ಮುಂದೆ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಪ್ರತಿವಾದಿಗಳಿಂದ 46,000 ರೂ.ಗಳನ್ನು ದಿನಾಂಕ: 5.9.91 ರಿಂದ ಶೇಕಡ 18ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ಅಧಿಭಾರ ಅರ್ಜಿಯನ್ನು ಡಿಆರ್‌ಟಿ:5: 2000-01 ರ ಅನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ಅಧಿಭಾರ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ದಿನಾಂಕ: 20.2.2004 ರಂದು ಅರ್ಜಿಯನ್ನು ಸಲ್ಲಿಸಿ ದಿವಂಗತ ಪಿ. ಚೌಡಯ್ಯ ಇವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯವರು ದಿವಂಗತ ಚೌಡಯ್ಯನವರ ಪತ್ನಿಯಾಗಿದ್ದು, 2ನೇ ಪ್ರತಿವಾದಿಯು ಹಿರಿಯ ಮಗ ಆಗಿರುತ್ತಾರೆ. ಈ ಸ್ವತ್ತನ್ನು ಇವರುಗಳು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ಅಧಿಭಾರ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹ ಇಲ್ಲದೆ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ವಾದಿಯ ಅಧಿಭಾರ ಅರ್ಜಿ ಮತ್ತು ಸದರಿ ಕಾಯಿದೆ ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕುಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ, ಅಲ್ಲದೆ 1 ಮತ್ತು 2ನೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ/ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ಮೇಲ್ಕಂಡ ಪರಿಸ್ಥಿತಿ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001: ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಮೊಹಮದ್ ಸಲೀಂ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ದಿವಂಗತ ಪಿ. ಚೌಡಯ್ಯ ಇವರ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯುವ ಬಗ್ಗೆ ಇಚ್ಛಿಸಿದಲ್ಲಿ ರೂ. 46,000ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 18.4.2004 ರ ಒಳಗಾಗಿ ಅಧಿಕೃತ ಚಲನ್ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದ ಒಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ತುಮಕೂರು ಜಿಲ್ಲೆ, ಚಿಕ್ಕನಾಯಕನಹಳ್ಳಿ ಟೌನ್, ಒಂದನೇ ವಿಭಾಗ, ಮಹಾಲಕ್ಷ್ಮಿ ಬಡಾವಣೆಯಲ್ಲಿರುವ ಮುನಿಸಿಪಲ್ ಖಾತೆ ನಂ. 1770/175 ಆಸ್ತಿ ನಂ. 1013 ಇದರಲ್ಲಿ 40x55 ಅಡಿಗಳ ನಿವೇಶನ ಮತ್ತು ಇದರಲ್ಲಿರುವ 25x36 ಅಡಿಗಳು ಅಳತೆಯ ಆರ್.ಸಿ.ಸಿ ಮನೆ ಸೇರಿ ಇದಕ್ಕೆ ಚಕ್ಕುಬಂದಿ.

ಪೂರ್ವಕ್ಕೆ: ಅರುಣ್‌ಕುಮಾರ್
ಪಶ್ಚಿಮಕ್ಕೆ: ರಸ್ತೆ
ಉತ್ತರಕ್ಕೆ: ರಸ್ತೆ
ದಕ್ಷಿಣಕ್ಕೆ: ಸತ್ಯಪ್ಪ.
ಈ ಮಧ್ಯೆ ಇರುವ ಸ್ವತ್ತು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 17.3.2004 ರಂದು ನೀಡಿರುತ್ತೇನೆ.

**ಮೊಹಮದ್ ಸಲೀಂ**
ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 468

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ:1142:ಡಿಟಿಸಿಆರ್:1998-1999 ದಿನಾಂಕ: 18ನೇ ಮಾರ್ಚ್ 2004**

**ಉಪಸ್ಥಿತರು :** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** ಅಬಕಾರಿ ಉಪ ನಿರೀಕ್ಷಕರು, ನಂ. 4, ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು :** 1. ಶ್ರೀ ಭವಾನಿ ಶಂಕರ್ ಶೆಟ್ಟಿ, ಬಿನ್ ರಾಮಣ್ಣ ಶೆಟ್ಟಿ, ಪೆರ್ಲಗುಡ್ಡೆ, ವೀರನಗರ, ಪಡೀಲ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 9.4.1999 ರಂದು ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರು ಅಬಕಾರಿ ಉಪ ಅಧೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಮಂಗಳೂರು ಮಹಾನಗರ ಪಾಲಿಕೆಯ ತಾರಾಯಿ ತೋಟ ಎಂಬಲ್ಲಿ ರಸ್ತೆಗಾವಲು ನಡೆಸುತ್ತಾ ಶಂಕಿತ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ರಾತ್ರಿ ಸುಮಾರು 8.30 ಗಂಟೆಗೆ ಪಂಪ್‌ವೆಲ್ ವೃತ್ತದ ಕಡೆಯಿಂದ ನಂತೂರು ಕಡೆಗೆ ಬರುತ್ತಿದ್ದ ವಾಹನವನ್ನು ತಡೆದು ನಿಲ್ಲಿಸಲು ವಾಹನದಲ್ಲಿ ಚಾಲಕನು ಮಾತ್ರ ಇದ್ದು ಸರಕಿನ ಬಗ್ಗೆ ದಾಖಲೆ ಪತ್ರಗಳನ್ನು ಕೇಳಲಾಗಿ ದಾಖಲೆ ಪತ್ರಗಳನ್ನು ಹಾಜರುಪಡಿಸಲು ವಿಫಲರಾದ ಕಾರಣ ವಾಹನವನ್ನು ಶೋಧನೆ ಮಾಡಲು ತೀರ್ಮಾನಿಸಿ ಸರ್ಚ್ ವಾರೆಂಟನ್ನು ಪಡೆಯಲು ಸಾಕಷ್ಟು ಕಾಲಾವಕಾಶವಿಲ್ಲದ ಕಾರಣ ಸರ್ಚ್ ಮೆಮೋವನ್ನು ತಯಾರಿಸಿ ಪಂಚರ ಸಮಕ್ಷಮ ಸದ್ರಿ ವಾಹನವನ್ನು ತಪಾಸಣೆ ಮಾಡಲು ವಾಹನದ ನೋಂದಣೆ ಸಂಖ್ಯೆ: ಸಿಆರ್‌ಎಕ್ಸ್-8635 ಆಗಿದ್ದು ವಾಹನದಲ್ಲಿದ್ದ ಸರಕನ್ನು ಪರಿಶೀಲಿಸಲು ವಾಹನದಲ್ಲಿ ಅಲ್ಟಾ ನೀಲಿ ತುಂಬಿದ ಚೀಲಗಳು, ಬ್ಲೀಚಿಂಗ್ ಪೌಡರ್ ಚೀಲಗಳು, ಫಿನಾಯಿಲ್ ಕ್ಯಾನ್‌ಗಳು ಹಾಗೂ ಆ್ಯಸಿಡ್ ತುಂಬಿದ ಕ್ಯಾನುಗಳು ಹಾಗೂ ಮೂರು ಮರದ ಪೆಟ್ಟಿಗೆಗಳಲ್ಲಿ ಮೆಷಿನರಿ ಬಿಡಿ ಭಾಗಗಳು ಕಂಡುಬಂದಿದ್ದು ಅವುಗಳ ಕೆಳಭಾಗದಲ್ಲಿ 245 ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ತುಂಬಿದ ಶೀಷೆಗಳು ಕಂಡು ಬಂದಿದ್ದು, ಶೀಷೆಗಳ ಮೇಲೆ ಕನಾಟಕ ಬ್ರೆವರೀಸ್ ಪ್ರೈ.ಲಿ. 9ನೇ ಮೈಲು ಮತ್ತು 20 ನೇ ಮೈಲು, ತುಮಕೂರು ರಸ್ತೆ ಎಂದು ನಮೂದಿಸಿದ್ದು ವಾಹನದಲ್ಲಿ ಇದ್ದ ಸರಕಿನ ವಿವರ ಈ ಕೆಳಗಿನಂತಿರುತ್ತದೆ.

1. ಅಲ್ಟಾ ನೀಲಿ ತುಂಬಿದ 20 ಕೆ. ಜಿ. ತೂಕದ - 48 ಚೀಲಗಳು
2. ಬ್ಲೀಚಿಂಗ್ ಪೌಡರ್ ತುಂಬಿದ 25 ತೂಕದ - 23 ಚೀಲಗಳು
3. ಫಿನಾಯಿಲ್ ತುಂಬಿದ 5 ಲೀಟರಿನ - 18 ಕ್ಯಾನುಗಳು
4. ಕೆಮಿಕಲ್ಸ್ ತುಂಬಿದ 5 ಲೀಟರಿನ - 30 ಕ್ಯಾನುಗಳು
5. ಕೆಮಿಕಲ್ಸ್ ತುಂಬಿದ 30 ಲೀಟರಿನ - 4 ಕ್ಯಾನುಗಳು
6. ಮಿಷಿನರಿ ಬಿಡಿಭಾಗಗಳನ್ನು ತುಂಬಿದ - 3 ಮರದ ಪೆಟ್ಟಿಗೆಗಳು

ಮತ್ತು ಈ ಕೆಳಗೆ ಕಾಣಿಸಿದ ಮದ್ಯದ ಶೀಷೆಗಳು ಕಂಡು ಬಂದಿರುತ್ತವೆ.

| ಕ್ರಮ ಸಂಖ್ಯೆ | ಮದ್ಯದ ವಿವರ | 750 ಮಿಲಿ | 370 ಮಿಲಿ | 180 ಮಿಲಿ | ಪೆಟ್ಟಿಗೆಗಳು | ಲೀಟರು |
|---|---|---|---|---|---|---|
| 1. | ಬ್ಯಾಗ್‌ಪೈಪರ್ ವಿಸ್ಕಿ | 1320 | 480 | 2880 | 190 | 1688.400 |
| 2. | ಮೆಕ್‌ಡೊವೆಲ್ ಬ್ರಾಂಡಿ | 60 | - | 720 | 20 | 174.600 |
| 3. | ಬ್ಯಾಗ್ ಪೈಪರ್ ಗೋಲ್ಡ್ ವಿಸ್ಕಿ | 120 | - | - | 10 | 90.00 |
| 4. | ಮೆಕ್‌ಡೊವೆಲ್ ವಿಸ್ಕಿ | 300 | - | - | 25 | 225.000 |
| | ಒಟ್ಟು | | | | 245 | 2178.000 |

ನಂತರ ಮೇಲಿನ ಮದ್ಯದ ಬಗ್ಗೆ ರಹದಾರಿ ಮತ್ತು ಇತರೆ ದಾಖಲಾತಿಗಳನ್ನು ಹಾಜರುಪಡಿಸಲು ಕೇಳಲಾಗಿ ರಹದಾರಿ ಇರುವುದಿಲ್ಲವೆಂದು, ಸದ್ರಿ ಮದ್ಯವನ್ನು ಬೆಂಗಳೂರಿನಿಂದ ಮಂಗಳೂರಿಗೆ ಸಾಗಾಟ ಮಾಡುತ್ತಿರುವುದಾಗಿ ತಿಳಿಸಿರುತ್ತಾನೆ. ಇದು ಅಕ್ರಮ ಮದ್ಯ ಸಾಗಾಣಿಕೆಯೆಂದು ಪರಿಗಣಿಸಿ ರಾಸಾಯನಿಕ ಪರೀಕ್ಷೆಗೆಂದು ಮೇಲಿನ ಮದ್ಯದಿಂದ 750 ಮಿಲಿಯ 4 ಶೀಷೆಗಳು, 375 ಮಿಲಿಯ 2 ಶೀಷೆಗಳು ಹಾಗೂ 180 ಮಿಲಿಯ 6 ಶೀಷೆಗಳನ್ನು ಪ್ರತ್ಯೇಕಿಸಿ ಅವುಗಳಿಗೆ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಲಾಯಿತು. ನಂತರ ಆರೋಪಿಯ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಆತನು ತನ್ನ ಹೆಸರು ಭವಾನಿ ಶಂಕರ್ ಶೆಟ್ಟಿ, ಬಿನ್ ರಾಮಣ್ಣ ಶೆಟ್ಟಿ, ಪ್ರಾಯ: 35 ವರ್ಷ, ಪೆರ್ಲಗುಡ್ಡೆ ಮನೆ, ವೀರನಗರ ಅಂಚೆ, ಪಡೀಲ್ ಮಂಗಳೂರು ಎಂದು ತಿಳಿಸಿರುತ್ತಾನೆ. ನಂತರ ಆರೋಪಿಯ ಹೆಸರು ವಿಳಾಸವಿರುವ ಚೀಟಿಗಳನ್ನು ಮಾದರಿ ಶೀಷೆಗಳಿಗೆ ಅಂಟಿಸಲಾಯಿತು. ವಾಹನದ ನೋಂದಣೆ ಸಂ: ಸಿಆರ್‌ಎಕ್ಸ್-8635 ಆಗಿದ್ದು ಎಂಜಿನ್ ಸಂ: 697 ಎಸ್‌ಪಿ-21898543 ಮತ್ತು ಚಾಸಿಸ್‌ಸಂಖ್ಯೆ: 368020918349 ಆಗಿರುತ್ತದೆ. ನಂತರ ಈ ರೀತಿ ರಹದಾರಿ ಪತ್ರವಿಲ್ಲದೆ ಮದ್ಯ ಸಾಗಣೆ ಮಾಡುವುದು ಕರ್ನಾಟಕ ಅಬಕಾರಿ ಕಾಯ್ದೆ ಪ್ರಕಾರ ಶಿಕ್ಷಾರ್ಹವಾಗಿರುತ್ತದೆ ಎಂದು ತಿಳಿಸಿ, ಸ್ಥಳದಲ್ಲಿಯೇ ಪಂಚನಾಮೆಯನ್ನು ತಯಾರಿಸಿ ಅಪರಾಧಿಯನ್ನು ದಸ್ತಗಿರಿ ಮಾಡಿ ಮದ್ಯ ಮತ್ತು ಇತರೆ ಸ್ವತ್ತುಗಳನ್ನು ಲಾರಿಯ ಸಮೇತ ಜಪ್ತುಗೊಳಿಸಿ ಕಛೇರಿಗೆ ಬಂದು ಆರೋಪಿತರ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965ರ 11, 14, 20, 32, 34 ಮತ್ತು 38 (ಎ) ಪ್ರಕಾರ ಮೊಕದ್ದಮೆ ಸಂಖ್ಯೆ: 17/98-99 ದಿನಾಂಕ: 9.4.1999 ರ ಮೂಲಕ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಪ್ರಕರಣಕ್ಕೆ ಸಂಬಂಧಿಸಿದ ಮಹಜರು, ಪ್ರಥಮ ಮಾಹಿತಿ ವರದಿ ಹಾಗೂ ಶೋಧನೆ ಸಮುಚಿತ ಆಧಾರವನ್ನು ಪಡೆಯದೇ ಇದ್ದುದಕ್ಕೆ ಕಾರಣಗಳನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೂ ಸಲ್ಲಿಸಿ, ಪ್ರಾಧಿಕಾರದ ಅನುಮತಿಯಂತೆ ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 10.5.99 ರಂದು ಮೆ: ಕೊಂಕಣ್ ಸ್ಪೆಷಾಲಿಟಿ ಪಾಲಿ ಪ್ರೊಡಕ್ಟ್ ಪ್ರೈವೇಟ್ ಲಿಮಿಟೆಡ್, ಬೈಕಂಪಾಡಿ ಮಂಗಳೂರು ಇವರಿಂದ ಅಧಿಕಾರ ಹೊಂದಿರುವ ಶ್ರೀ ಮಹೇಶ್ ಎಲ್. ಬೊಂದೆಲ್ ಇವರು ತಮ್ಮ ವಕೀಲರ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸುತ್ತಾ ಪ್ರಕರಣದಲ್ಲಿ ಜಪ್ತುಗೊಳಿಸಿರುವ ಅಲ್ಟಾ ನೀಲಿ ತುಂಬಿದ ಚೀಲಗಳು ಅಬಕಾರಿ ವಸ್ತುಗಳ ಅಡಿಯಲ್ಲಿ ಬರುವುದಿಲ್ಲವೆಂದು, ಅವುಗಳನ್ನು ಕಡಲೂರಿನಿಂದ ಅಸೋಸಿಯೇಟ್ಸ್ ರೋಡ್ ಕ್ಯಾರಿಯರ್ಸ್ ಮುಖಾಂತರ ಮಂಗಳೂರಿಗೆ ಸಾಗಣೆ ಮಾಡುತ್ತಿದ್ದುದಾಗಿ ಅವುಗಳನ್ನು ಮುಟ್ಟುಗೋಲು ಹಾಕಿಕೊಳ್ಳದೆ ಹಿಂದಕ್ಕೆ ನೀಡಬೇಕೆಂದು ಕೋರಿರುತ್ತಾರೆ. ಸಹಾಯಕ ಅಭಿಯೋಜಕ ನಿಯೋಜಕರು ಇವರು ಅಲ್ಟಾ ಬ್ಲೂ

ಪಿಗ್‌ಮೆಂಟ್ ಅಬಕಾರಿ ವಸ್ತು ಇಲ್ಲದಿರುವುದರಿಂದ ಕೆಲವೊಂದು ಷರತ್ತಿಗೊಳಪಡಿಸಿ ಬಿಟ್ಟು ಕೊಡಬಹುದೆಂದು ಅಭಿಪ್ರಾಯಪಟ್ಟಿದ್ದು ಈ ಪ್ರಾಧಿಕಾರವು ದಿನಾಂಕ: 11.5.1999 ರಂದು 3 ಲಕ್ಷ ಇಂಡೆಮ್ನಿಟಿ ಬಾಂಡ್ ಪಡೆದು ಜಪ್ತು ಪಡಿಸಲಾಗಿದ್ದ 20 ಕೆ. ಜಿ. 48 ಚೀಲ ಅಲ್ಟ್ರಾ ಬ್ಲ್ಯೂ ಪಿಗ್‌ಮೆಂಟನ್ನು ಅರ್ಜಿದಾರರ ವಶಕ್ಕೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿರುತ್ತದೆ.

ದಿನಾಂಕ: 17.5.1999 ರಂದು ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್, ಮಂಗಳೂರು ಇವರು ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿದ್ದ ಬ್ಲೀಚಿಂಗ್ ಪೌಡರ್, ಫಿನಾಯಿಲ್, ಕೆಮಿಕಲ್ಸ್ ಹಾಗೂ ಮೆಷಿನರಿ ಬಿಡಿಭಾಗಗಳನ್ನು ಬಿಡುಗಡೆಗೊಳಿಸಲು ತಮ್ಮ ವಕೀಲರ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯನ್ನು ನೀಡಿದ್ದು, ಸದ್ರಿ ಅರ್ಜಿಯನ್ನು ಪ್ರಾಧಿಕಾರವು ದಿನಾಂಕ: 20.5.1999 ರಂದು ತಿರಸ್ಕರಿಸಿ ಆದೇಶ ನೀಡಿರುತ್ತದೆ. ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ಸತ್ರ ನ್ಯಾಯಾಲಯವು ಪ್ರಾಧಿಕಾರದ ಆದೇಶವನ್ನು ತಳ್ಳಿ ಹಾಕಿ ಇಂಡೆಮ್ನಿಟಿ ಬಾಂಡ್ ಪಡೆದು ಅಸೋಸಿಯೇಟೆಡ್ ರೋಡ್ ಕ್ಯಾರಿಯರ್, ಮಂಗಳೂರು ಇವರಿಗೆ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿದ್ದ ಬ್ಲೀಚಿಂಗ್ ಪೌಡರ್, ಫಿನಾಯಿಲ್, ಕೆಮಿಕಲ್ಸ್ ಹಾಗೂ ಮೆಷಿನರಿ ಬಿಡಿಭಾಗಗಳನ್ನು ಮಧ್ಯಂತರ ಅವಧಿಗೆ ಬಿಡುಗಡೆ ಮಾಡಲು ಆದೇಶಿಸಿದ್ದು ಮಾನ್ಯ ಸತ್ರ ನ್ಯಾಯಾಲಯದ ಆದೇಶದಂತೆ ಪ್ರಾಧಿಕಾರವು ದಿನಾಂಕ: 24.6.99 ರಂದು ಅರ್ಜಿದಾರರಾದ ಮೆ: ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್ ಲಿಮಿಟೆಡ್, ಮಂಗಳೂರು ಇವರಿಗೆ 3 ಲಕ್ಷ ರೂಪಾಯಿಗಳ ಇಂಡೆಮ್ನಿಟಿ ಬಾಂಡ್ ಪಡೆದು ಬಿಡುಗಡೆ ಮಾಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದ ಮಾಲೀಕರು ತಮ್ಮ ವಕೀಲರ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯನ್ನು ದಿನಾಂಕ: 16.5.99 ರಂದು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರು ತಮ್ಮ ಪತ್ರ ದಿನಾಂಕ: 6.7.99 ರಲ್ಲಿ ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನ ಮತ್ತು ಮದ್ಯವನ್ನು ಕೋರಿ ಯಾವುದೇ ವ್ಯಕ್ತಿಯು ಅರ್ಜಿ ಸಲ್ಲಿಸಿರುವುದಿಲ್ಲವೆಂದೂ, ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ಈ ಹಿಂದೆ ಮದ್ಯ ಸಾಗಾಣಿಕೆಯ ಆರೋಪದಿಂದ ಸರಕಾರಕ್ಕೆ ವಶಪಡಿಸಿಕೊಂಡಿದ್ದು, ಈ ವಾಹನದಲ್ಲಿ ಎರಡನೇ ಬಾರಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ದೃಢಪಟ್ಟಿರುವುದರಿಂದ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದಾಗಿ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ ಮದ್ಯವು ರಾಸಾಯನಿಕ ತಜ್ಞರ ವರದಿಯಂತೆ 42.8% ತೀಕ್ಷ್ಣತೆ ಹೊಂದಿದ್ದು ಮಾನವ ಸೇವನೆಗೆ ಯೋಗ್ಯವಾಗಿರುವುದರಿಂದ ಮದ್ಯವನ್ನು ಮುಟ್ಟುಗೋಲು ಹಾಕಿಕೊಂಡು ಸರ್ಕಾರದ ಆದಾಯದ ದೃಷ್ಟಿಯಿಂದ ಬಹಿರಂಗವಾಗಿ ವಿಲೇವಾರಿ ಮಾಡಲು ವಿನಂತಿಸಿಕೊಂಡಿರುವ ಪ್ರಕಾರ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಈ ಪ್ರಾಧಿಕಾರವು ದಿನಾಂಕ: 17.8.99 ರಂದು ಆದೇಶ ನೀಡಿರುತ್ತದೆ.

ದಿನಾಂಕ: 28.9.99 ರಂದು ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದ ಮಾಲೀಕರಿಗೆ ಅಕ್ರಮ ಮದ್ಯ ಸಾಗಾಣಿಕೆಯ ಆರೋಪಕ್ಕಾಗಿ ನಿಮ್ಮ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸನ್ನು ಪ್ರಾಧಿಕಾರವು ನೀಡಿರುತ್ತದೆ. ಪ್ರಾಧಿಕಾರವು ನೀಡಿದ ನೋಟೀಸಿಗೆ ದಿನಾಂಕ: 8.10.99 ರಂದು ಉತ್ತರವನ್ನು ಸಲ್ಲಿಸಿ ತನ್ನ ತಿಳಿವಳಿಕೆಗೆ ಬಾರದೆ ಮದ್ಯವನ್ನು ಲಾರಿಗೆ ತುಂಬಿಸಲಾಗಿದೆಯೆಂದು ತನ್ನ ಲಾರಿಗೆ ಅಲ್ಟ್ರಾ ಬ್ಲ್ಯೂಪಿಗ್‌ಮೆಂಟ್ ಕೆಮಿಕಲ್ಸ್ ಮತ್ತು ಮೆಷಿನರಿ ಬಿಡಿಭಾಗಗಳನ್ನು ಮಾತ್ರ ಲಾರಿಗೆ ತುಂಬಿಸಿರುವುದಾಗಿ ಗ್ರಹಿಸಿ ಸಾಗಣೆ ಮಾಡಿರುತ್ತೇನೆಂದು ತಿಳಿಸುತ್ತಾ ಲಾರಿಯನ್ನು ತನ್ನ ವಶಕ್ಕೆ ನೀಡಬೇಕೆಂದು ಪ್ರಾರ್ಥಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರವಾಗಿ ಮೂರು ಸಾಕ್ಷಿಗಳನ್ನು ಮತ್ತು ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 9.4.99 ರಂದು ವಾಹನ ಲಾರಿ ಸಂ: ಸಿಆರ್‌ಎಕ್ಸ್-8635 ರಲ್ಲಿ ಅಕ್ರಮವಾಗಿ ಮದ್ಯ ಸಾಗಣೆ ಮಾಡಲಾಗಿತ್ತೇ?
2. ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?
3. ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1. ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಈ ಪ್ರಕರಣದ ಫಿರ್ಯಾದುದಾರರಾದ ಶ್ರೀ ಕೆ. ನೀಲಯ್ಯ, ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ದಿನಾಂಕ: 3.4.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 9.4.99 ರಂದು ರಾತ್ರಿ 8.30 ಗಂಟೆ ಸಮಯದಲ್ಲಿ ತಮ್ಮ ಉಪ ಅಧೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಮಂಗಳೂರು ಮಹಾನಗರ ಪಾಲಿಕೆಯ ರಾಷ್ಟ್ರೀಯ ಹೆದ್ದಾರಿ 17ರ ತಾರಾಯಿ ತೋಟ ಎಂಬಲ್ಲಿ ರಸ್ತೆಗಾವಲು ನಡೆಸುತ್ತ ವಾಹನಗಳ ತಪಾಸಣೆ ಮಾಡುತ್ತಿದ್ದ ಸಮಯ ವಾಹನ ಲಾರಿ ಸಂಖ್ಯೆ: ಸಿಆರ್‌ಎಕ್ಸ್-8635 ಪಂಪ್‌ವೆಲ್ ಕಡೆಯಿಂದ ನಂತೂರು ಕಡೆಗೆ ಬರುತ್ತಿದ್ದಾಗ ವಾಹನವನ್ನು ನಿಲ್ಲಿಸಿ ನೋಡಲಾಗಿ ವಾಹನದಲ್ಲಿ ಚಾಲಕನಲ್ಲದೇ ಬೇರೆ ಯಾರೂ ಇರಲಿಲ್ಲ. ಸರಕಿನ ಬಗ್ಗೆ ವಿಚಾರ ಮಾಡಲು ಸಮರ್ಪಕವಾದ ಉತ್ತರವನ್ನು ನೀಡದ ಕಾರಣ ಅನುಮಾನದಿಂದ ಲಾರಿಯ ತಪಾಸಣೆ ಮಾಡಲು ನಿರ್ಧರಿಸಿ ನ್ಯಾಯಾಲಯದಿಂದ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ

ಸ್ಥಳದಲ್ಲಿ ಸರ್ಚ್ ಮೆಮೋ ತಯಾರಿಸಿ ಲಾರಿಯನ್ನು ಶೋಧನೆ ಮಾಡಲಾಗಿ ಲಾರಿಯಲ್ಲಿ ಮೇಲ್ನೋಟಕ್ಕೆ ಅಲ್ಪಾ ನೀಲಿ ತುಂಬಿದ ಚೀಲಗಳು, ಬ್ಲೀಚಿಂಗ್ ಪೌಡರ್, ಕ್ಯಾನುಗಳಲ್ಲಿ ಆ್ಯಸಿಡ್ ಮತ್ತು ಮಿಷಿನರಿ ಬಿಡಿಭಾಗಗಳು ತುಂಬಿದ ಮೂರು ಪೆಟ್ಟಿಗೆಗಳು ಇದ್ದು ಅವುಗಳ ಅಡಿಯಲ್ಲಿ ಮದ್ಯದ 245 ಪೆಟ್ಟಿಗೆಗಳಿರುವುದು ಕಂಡು ಬಂತು. ಲಾರಿಯಲ್ಲಿ ಈ ಕೆಳಗಿನಂತೆ ಸ್ವತ್ತುಗಳು ಇರುತ್ತವೆ.

1. ಅಲ್ಪಾ ನೀಲಿ ತುಂಬಿದ 28 ಕೆಜಿಯ - 48 ಚೀಲಗಳು
2. ಬ್ಲೀಚಿಂಗ್ ಪೌಡರ್ 25 - 23 ಚೀಲಗಳು
3. ಫಿನಾಯಿಲ್ 5 ಲೀಟರು ಗಾತ್ರದ - 18 ಕ್ಯಾನುಗಳು
4. ಕೆಮಿಕಲ್ಸ್ 5 ಲೀಟರ್ ಗಾತ್ರದ - 30 ಕ್ಯಾನುಗಳು
5. ಮೆಷಿನರಿ ಬಿಡಿಭಾಗಗಳಿರುವ ಮರದ 3 ಪೆಟ್ಟಿಗೆಗಳು.

**ಮದ್ಯ ತುಂಬಿದ ಶೀಷೆಗಳ ವಿವರ**

| ಕ್ರ. ಸಂ. | ಮದ್ಯದ ವಿವರ | 750 ಲೀಟರು | 375 ಲೀಟರು | 180 ಲೀಟರು | ಪೆಟ್ಟಿಗೆಗಳು |
|---|---|---|---|---|---|
| 1. | ಬ್ಯಾಗ್‌ಪೈಪರ್ ವಿಸ್ಕಿ | 1320 | 480 | 2880 | 190 |
| 2. | ಮೆಕ್‌ಡೊವೆಲ್ ಬ್ರಾಂಡಿ | 60 | - | 720 | 20 |
| 3. | ಬ್ಯಾಗ್‌ಪೈಪರ್ ಗೋಲ್ಡ್ ವಿಸ್ಕಿ | 120 | - | - | 10 |
| 4. | ಮೆಕ್‌ಡೊವೆಲ್ ವಿಸ್ಕಿ | 300 | - | - | 25 |
| | | 1800 | 480 | 3600 | 245 |
| | | | ಒಟ್ಟು | 2178 ಲೀಟರುಗಳು | |

ಈ ಮೇಲಿನ ಮದ್ಯದ ಶೀಷೆಗಳ ಮೇಲೆ ಕೆ. ಬಿ ಅಂಡ್ ಡಿ 9ನೇ ಮೈಲಿ ಮತ್ತು 20ನೇ ಮೈಲಿ ತುಮಕೂರು ರಸ್ತೆ ಎಂದು ನಮೂದಿಸಲಾಗಿತ್ತು. ಸದ್ರಿ ಮದ್ಯವನ್ನು ಬೆಂಗಳೂರಿನಿಂದ ಮಂಗಳೂರಿಗೆ ಸಾಗಾಟ ಮಾಡುತ್ತಿರುವುದಾಗಿ ಅವುಗಳನ್ನು ಸಾಗಣೆ ಮಾಡಲು ಯಾವುದೇ ರಹದಾರಿ ಇಲ್ಲವೆಂದು ತಿಳಿಸಿರುತ್ತಾರೆ. ರಾಸಾಯನಿಕ ಪರೀಕ್ಷೆಗಾಗಿ ಮೇಲಿನ ಮದ್ಯದಿಂದ ಒಟ್ಟು 750 ಮಿಲಿಯ 4 ಶೀಷೆಗಳನ್ನು, 375 ಮಿಲಿಯ 2 ಶೀಷೆಗಳನ್ನು ಮತ್ತು 180 ಮಿಲಿಯ 6 ಶೀಷೆಗಳನ್ನು ಪ್ರತ್ಯೇಕಿಸಿ ಅವುಗಳಿಗೆ ಇಲಾಖಾ ಸೀಲಿನಿಂದ ಸೀಲು ಮಾಡಿ ಸೀಲಿನ ನಮೂನೆ ತಯಾರಿಸಿ ಆರೋಪಿಯ ಹೆಸರು ಮತ್ತು ವಿಳಾಸ ಕೇಳಲು ಆತನು ತನ್ನ ಹೆಸರು ಭವಾನಿ ಶಂಕರ ಶೆಟ್ಟಿ, ಬಿನ್: ಶಂಕರ ಶೆಟ್ಟಿ, ಪ್ರಾಯ: 33 ವರ್ಷ ಪೆರ್ಲಗುಡ್ಡೆ ಮನೆ, ವೀರನಗರ, ಪಡೀಲ್, ಮಂಗಳೂರು ಎಂದು ತಿಳಿಸಿರುತ್ತಾನೆ. ನಂತರ ಆರೋಪಿಯ ಹೆಸರು ವಿಳಾಸವಿರುವ ಗುರುತಿನ ಚೀಟಿಗಳನ್ನು ರಾಸಾಯನಿಕ ಮಾದರಿ ಶೀಷೆಗಳಿಗೆ ಅಂಟಿಸಲಾಯಿತು. ವಾಹನದ ನೋಂದಣಿ ಸಂಖ್ಯೆ: ಸಿಆರ್‌ಎಕ್ಸ್-8635 ಇಂಜಿನ್ ಸಂ: 697 ಎಸ್‌ಪಿ: 21898543 ಮತ್ತು ಚಾಸಿಸ್ ಸಂಖ್ಯೆ: 3680-20-918349 ಇರುತ್ತದೆ. ವಾಹನಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಇಲ್ಲವೆಂದು ತಿಳಿಸಿರುತ್ತಾನೆ. ನಂತರ ಆರೋಪಿಯನ್ನು ಸ್ವತ್ತುಗಳೊಂದಿಗೆ ಕಛೇರಿಗೆ ತರಲಾಯಿತು. ಆತನ ಮೇಲೆ ತಕ್ಷೀರು ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿ, ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಾಗಿ ಮುಂದಿನ ನಡವಳಿಕೆಯ ಬಗ್ಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುವುದಾಗಿ ತಿಳಿಸಿ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದೂ, ಸ್ಥಳ ಮಹಜರನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದೂ, ಮಾನ್ಯ ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ದಿನಾಂಕ: 24.4.03 ರಂದು ಮೆ: ಅಸೋಸಿಯೇಟೆಡ್ ರೋಡ್ ಕ್ಯಾರಿಯರ್, ಮಂಗಳೂರು ಇವರ ಪರವಾಗಿ ಹಾಜರಾದ ವಕೀಲರು ಜಿ.ಕೆ.ಪಿ. ಜೋಯಿಸ್ ಇವರ ಪಾಟೀ ಸವಾಲಿಗಾಗಿ ಉತ್ತರಿಸುತ್ತ ತಾನು ತಪಾಸಣೆ ಮಾಡುತ್ತಿದ್ದ ಸ್ಥಳವು ಪಂಪ್‌ವೆಲ್ ವೃತ್ತದಿಂದ ನಂತೂರು ವೃತ್ತಕ್ಕೆ ಬರುವ ಸ್ಥಳವೆಂದು, ಸಾಕಷ್ಟು ವಾಹನ ಚಲಿಸುವ ಸ್ಥಳವೆಂದು ರಸ್ತೆಯ ಎರಡೂ ಬದಿಯಲ್ಲಿ ಸಾಕಷ್ಟು ಮನೆಗಳಿವೆಯೆಂದರೆ ಸರಿಯಲ್ಲವೆಂದು, ಎರಡು ಗ್ಯಾರೇಜ್‌ಗಳಿದ್ದವೆಂದು ತಿಳಿಸಿರುತ್ತಾರೆ. ವಾಹನವನ್ನು ಕೈತೋರಿಸಿ ನಿಲ್ಲಿಸಿದೆವೆಂದು ತಪಾಸಣೆ ಮಾಡುವ ಸಮಯ ನಮ್ಮನ್ನು ಹೊರತುಪಡಿಸಿ ಬೇರೆಯವರು ಯಾರೂ ಸೇರಲಿಲ್ಲವೆಂದು ಬೇರೆ ಗೌರವಸ್ಥ ಜನರನ್ನು ಬರಮಾಡಿಕೊಳ್ಳಲು ಪ್ರಯತ್ನಿಸಲಿಲ್ಲವೆಂದು, ಪಂಚನಾಮೆ ಮಾಡುವ ಪೂರ್ವದಲ್ಲಿ ವಾಹನದಲ್ಲಿನ ವಸ್ತುಗಳನ್ನು ಪರಿಶೀಲಿಸಿದ್ದೇವೆಂದು ಪಂಚನಾಮೆಯಲ್ಲಿ ನಮೂದಿಸಿರುವ ಕ್ರಮ ಸಂಖ್ಯೆ 1 ರಿಂದ 6 ರವರೆಗೆ ಬರುವ ವಸ್ತುಗಳು ಅಬಕಾರಿ ಕಾಯ್ದೆ ವ್ಯಾಪ್ತಿಗೆ ಬರುವುದಿಲ್ಲವೆಂದು, ಆದರೂ ಲಾರಿಯಲ್ಲಿ ಮದ್ಯದ ಬಾಟಲಿಗಳು ಇದ್ದ ಕಾರಣ ಅಬಕಾರಿ ಕಾಯ್ದೆ ವ್ಯಾಪ್ತಿಗೆ ಒಳಪಡುತ್ತದೆ ಎಂದು ಯಾದಾಸ್ತಿನಲ್ಲಿ ತಿಳಿಸಿದಂತೆ 1ನೇ ಐಟಂ ಅಲ್ಪಾ ನೀಲಿ ಚೀಲಗಳು, 2) ಬ್ಲೀಚಿಂಗ್ ಪೌಡರ್ 3) ಫಿನೈಲ್ ತುಂಬಿದ ಕ್ಯಾನ್‌ಗಳು 4) ಕೆಮಿಕಲ್ ತುಂಬಿದ ಕ್ಯಾನ್‌ಗಳು 5) ಕೆಮಿಕಲ್ ತುಂಬಿದ ಕ್ಯಾನ್‌ಗಳು 6) ಮರದ ಪೆಟ್ಟಿಗೆಗಳೆಂದರೆ ಸರಿ. 7ನೇ ಐಟಂ ಮಾತ್ರ ಕರ್ನಾಟಕ ಕಾಯ್ದೆ ಅಡಿಯಲ್ಲಿ ಬರುತ್ತವೆಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ. 1 ರಿಂದ 6 ರವರೆಗಿನ ಸ್ವತ್ತುಗಳು ಮೆ: ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್ ಕಳುಹಿಸಿ ಕೊಟ್ಟಂತಹ ವಸ್ತುಗಳು ಎಂಬ ವಿಚಾರ ನನ್ನ ಗಮನಕ್ಕೆ ಬಂದಿದೆ ಎಂದರೆ ಸರಿಯಲ್ಲ. ಪಂಚನಾಮೆಯಲ್ಲಿ ತಿಳಿಸಿದ ಕ್ರಮ ಸಂಖ್ಯೆ: 7ನೇ ವಸ್ತುವಿಗೂ, ಕ್ರಮ ಸಂಖ್ಯೆ: 1 ರಿಂದ 6ರ ತನಕದ ವಸ್ತುಗಳಿಗೆ ಯಾವುದೇ ಸಂಬಂಧವಿಲ್ಲ ಎಂದು ಸೂಚಿಸಿದರೆ ಸರಿಯಲ್ಲ. ಅವುಗಳನ್ನು ಅಬಕಾರಿ ಕಾಯ್ದೆ ವ್ಯಾಪ್ತಿಯೊಳಗೆ ಬಾರದಿದ್ದರೂ ಕೂಡಾ ಕಾನೂನು ಬಾಹಿರವಾಗಿ ವಶಪಡಿಸಿಕೊಂಡಿದ್ದೇವೆಂದರೆ ಸರಿಯಲ್ಲ. ವಾಹನವನ್ನು ನಮ್ಮ ಕಾರ್ಯಾಲಯಕ್ಕೆ ತರಿಸಿಕೊಂಡು ದಾಖಲೆಯನ್ನು ಸೃಷ್ಟಿ ಮಾಡಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

**ಪ್ರಾ.ಸಾ:2**

ಶ್ರೀ ಸೋಮೇಶ್ವರ್, ಅಬಕಾರಿ ಉಪ ಅಧೀಕ್ಷಕರು ಸದರಿ ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿನಾಂಕ: 24.4.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಅವರು 1998-99ನೇ ಸಾಲಿಗೆ ಅಬಕಾರಿ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದು ದಿನಾಂಕ: 15.4.99 ರಂದು ಅಬಕಾರಿ ಉಪ ನಿರೀಕ್ಷಕರಿಂದ ಈ ಪ್ರಕರಣದ ದಾಖಲಾತಿಗಳನ್ನು ಪಡೆದುಕೊಂಡಿದ್ದು, ದಿನಾಂಕ: 19.5.99 ರಂದು ಮಾದರಿ ಶೀಷೆಗಳನ್ನು ಅಬಕಾರಿ ರಕ್ಷಕರ ಮುಖೇನ ರಾಸಾಯನಿಕ ವಿಶ್ಲೇಷಣಾ ವರದಿಗಾರರಿಗೆ ಕಳುಹಿಸಲಾಯಿತು. ದಿನಾಂಕ: 31.5.99 ರಂದು ಅದೇ ರಕ್ಷಕನ ಮುಖಾಂತರ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪಡೆಯಲಾಯಿತು, ಮತ್ತು ತಮಗೆ ವರ್ಗಾವಣೆಯಾದ ಪ್ರಯುಕ್ತ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಮತ್ತು ಬಾಟಲಿಗಳನ್ನು ಅಬಕಾರಿ ನಿರೀಕ್ಷಕರು, ಕೂಳೂರು ಇವರಿಗೆ ಹಸ್ತಾಂತರಿಸಲಾಯಿತು ಎಂದು ರಾಸಾಯನಿಕ ವಿಶ್ಲೇಷಕರ ವರದಿಯಂತೆ ಅದು ಅಮಲು ಪದಾರ್ಥ ಎಂದು ತಿಳಿದು ಬಂದಿದ್ದಾಗಿ ಎಂದು ಸಾಕ್ಷಿ ನೀಡಿರುತ್ತಾರೆ.

ಮೆ: ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್ ಇವರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಿದ ವಸ್ತುಗಳು ಮದ್ಯದ ಬಾಟಲ್‌ಗಳಾಗಿರುತ್ತವೆ. ಸ್ಯಾಂಪಲ್ ಬಾಟಲ್‌ಗಳನ್ನು ಅಬಕಾರಿ ಉಪ ನಿರೀಕ್ಷಕರೇ ಸೀಲ್ ಮಾಡಿ ನೀಡಿದ್ದು, ಅವುಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

**ಪ್ರಾ.ಸಾ.3:**

ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕ, ಕುಲಶೇಖರ ವಲಯ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 5.2.2004 ರಂದು ಹಾಜರಾಗಿ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ: 3.5.99 ರಂದು 6 ಮಾದರಿ ಶೀಷೆಗಳನ್ನು ಕುಲಶೇಖರ ವಲಯ ಅಬಕಾರಿ ನಿರೀಕ್ಷಕರಿಂದ ಪಡೆದು ಅದೇ ದಿನ ಮಂಗಳೂರಿನ ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ಸದರಿ ಮಾದರಿ ಶೀಷೆಗಳೊಂದಿಗೆ ಸಂಬಂಧಿಸಿದ ಕಾಗದ ಪತ್ರಗಳನ್ನು ರಾಸಾಯನಿಕ ತಜ್ಞರಿಗೆ ನೀಡಿರುತ್ತೇನೆ. ದಿನಾಂಕ: 16.6.99 ರಂದು ರಾಸಾಯನಿಕ ತಜ್ಞರು ಪರಿಶೀಲಿಸಿದ ನಂತರ ಸದರಿ ಮಾದರಿ ಶೀಷೆ ಮತ್ತು ವರದಿಯನ್ನು ಪಡೆದು ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆಂದು ತಜ್ಞರು ನೀಡಿರುವ ವರದಿಯ ಛಾಯಾ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಸದ್ರಿ ವರದಿಯ ಮೂಲ ಪ್ರತಿ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿದ್ದು, ಛಾಯಾ ಪ್ರತಿಯನ್ನು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಪ್ರಾ.ಸಾ. 1, ಪ್ರಾ.ಸಾ. 2 ಮತ್ತು ಪ್ರಾ.ಸಾ. 3 ಇವರು ನೀಡಿರುವ ಸಾಕ್ಷಿ ಆಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 9.4.99 ರಂದು ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನ (ಟಾಟಾ ಲಾರಿ 608) ಸಂಖ್ಯೆ: ಸಿಆರ್‌ಎಕ್ಸ್-8635 ರಲ್ಲಿ ಅಕ್ರಮವಾಗಿ ಮದ್ಯವು ಸಾಗಾಣಿಕೆಯಾಗಿರುವುದು ನಿಸ್ಸಂದೇಹವಾಗಿ ನಿಜವಿರುವುದು ಕಂಡು ಬರುತ್ತದೆ. ಈ ಕಾರಣದಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಣೆ ತನ್ನ ತಿಳುವಳಿಕೆಗೆ ಬಾರದೇ ನಡೆದಿರುತ್ತೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸುವುದು ನೋಂದಾಯಿತ ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನ ಮಾಲೀಕರಿಗೆ ಈ ಪ್ರಾಧಿಕಾರವು 9 ಬಾರಿ ನೋಟೀಸು ನೀಡಿದ್ದರೂ ಅದು ಸ್ವೀಕೃತಗೊಳ್ಳದೆ ಹಿಂದೆ ಬಂದಿರುತ್ತದೆ. ಒಂದೆರಡು ಬಾರಿ ನೋಟೀಸನ್ನು ಮುದ್ದಾಮಾಗಿ ಜಾರಿ ಮಾಡಲು ಪ್ರಯತ್ನಿಸಿದರೂ ವಾಹನ ಮಾಲೀಕರು ತಾವು ನೀಡಿದ್ದ ವಿಳಾಸದಲ್ಲಿ ಲಭ್ಯವಿರುವುದಿಲ್ಲ ಅಥವಾ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನದ ಬಿಡುಗಡೆಗೆ ಪ್ರಯತ್ನ ಮಾಡಿರುವುದಿಲ್ಲ, ಮತ್ತು ದಿನಾಂಕ: 9.4.99 ರಂದು ವಾಹನದಲ್ಲಿ ತಾವೇ ಸ್ವತಃ ಚಾಲಕರಾಗಿ ಅಕ್ರಮ ಮದ್ಯದ ಆರೋಪಣೆಗೆ ಗುರಿಯಾಗಿರುತ್ತಾರೆ. ಅಲ್ಲದೆ ಸದ್ರಿ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟದ ಆರೋಪದ ಮೇಲೆ ಈ ಹಿಂದೆ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುವುದರಿಂದ ಹಾಗೂ ಈ ಅಕ್ರಮ ಮದ್ಯ ಸಾಗಣೆಯನ್ನು ವಾಹನ ಮಾಲೀಕರು ತಾವೇ ತಮ್ಮ ತಿಳುವಳಿಕೆಯಿಂದಲೇ ಎಸಗಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ದಿನಾಂಕ: 9.4.99 ರಂದು ಅಕ್ರಮ ಮದ್ಯದೊಂದಿಗೆ ಬೆರೆತು ಸಾಗಣೆಯಾಗುತ್ತಿದ್ದ ಇನ್ನಿತರ ವಸ್ತುಗಳಾದ ಬ್ಲೂ ಪಿಗ್‌ಮೆಂಟ್, ಬ್ಲೀಚಿಂಗ್ ಪೌಡರ್, ರಾಸಾಯನಿಕ, ಫಿನೈಲ್ ಹಾಗೂ ವಾಹನದ ಬಿಡಿಭಾಗಗಳ ಪೆಟ್ಟಿಗೆಗಳನ್ನು ಬಿಡುಗಡೆಗೆ ಕೋರಿ ತಮ್ಮ ವಕೀಲರ ಮುಖಾಂತರ ಶ್ರೀ ಜೋಗಿಂದರ್ ಶರ್ಮಾ, ಮ್ಯಾನೇಜರ್, ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್‌ರವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಸದ್ರಿ ಸಾಕ್ಷಿಯನ್ನು ಡಿಡಬ್ಲ್ಯೂ-1 ಎಂದು ಪರಿಗಣಿಸಿ ಅವರ ಸಾಕ್ಷಿಯನ್ನು ದಿನಾಂಕ: 11.12.2003 ರಂದು ವಿಚಾರಣೆ ಮಾಡಲಾಗಿದೆ. ಡಿಡಬ್ಲ್ಯೂ-1 ಸಾಕ್ಷಿ ಶ್ರೀ ಜೋಗಿಂದರ್ ಶರ್ಮಾ ಇವರು ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್, ಮಂಗಳೂರು ಇದರ ಬ್ರಾಂಚ್ ಮ್ಯಾನೇಜರ್ ಆಗಿದ್ದು ದೇಶದ ಹಲವು ಭಾಗಗಳಲ್ಲಿ ತಮ್ಮ ಶಾಖೆಗಳಿರುತ್ತವೆ. ನಮ್ಮ ಕಂಪೆನಿಯು ಸರಕುಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವ ವ್ಯವಹಾರವನ್ನು ಮಾಡುತ್ತೇವೆ. ದಿನಾಂಕ: 8.4.99 ರಂದು ಬೆಂಗಳೂರಿನ ನಮ್ಮ ಶಾಖೆಯಿಂದ ಕೆಲವು ವಸ್ತುಗಳನ್ನು ಮಂಗಳೂರಿನ ನಮ್ಮ ಶಾಖೆಗೆ ಲಾರಿ ಸಂಖ್ಯೆ: ಸಿಆರ್‌ಎಕ್ಸ್-8635 ರಲ್ಲಿ ಸಂಬಂಧಪಟ್ಟ ಚಲನ್‌ಗಳ ಮೂಲಕ ಕಳುಹಿಸಿದ್ದು, ದಿನಾಂಕ: 9.4.99 ರಂದು ನಮ್ಮ ಕಂಪೆನಿಯು ಕಳುಹಿಸಿದ್ದ ಸರಕುಗಳನ್ನು ಚಲನ್ ಮತ್ತು ಲಾರಿ ಸಮೇತ ಇಲಾಖೆಯವರು ವಶಪಡಿಸಿಕೊಂಡಿರುತ್ತಾರೆ. ಪ್ರಕರಣದ ಮಹಜರಿನಲ್ಲಿ ನಮೂದಿಸಿರುವ ಕ್ರಮ ಸಂಖ್ಯೆ: 1 ರಿಂದ 6ರ ತನಕ ಸ್ವತ್ತುಗಳು ನಮಗೆ ಸಂಬಂಧಪಟ್ಟಿರುತ್ತವೆ. ಅವುಗಳು ಅಬಕಾರಿ ಕಾಯ್ದೆಯ ವ್ಯಾಪ್ತಿಯೊಳಗೆ ಬರುವುದಿಲ್ಲ. ಸದರಿ ಸರಕುಗಳಿಗೆ ಸಂಬಂಧಿಸಿದ ನಮ್ಮ ಬ್ರಾಂಚ್‌ಗೆ ತಲುಪಿದ್ದ ಚಲನ್ ಪ್ರತಿಗಳನ್ನು ಹಾಜರುಪಡಿಸಿದ್ದು ಅವುಗಳನ್ನು ನೋಡಿದೆನು. ನಿಶಾನೆ ಪಿ-1 ರಿಂದ ನಿಶಾನೆ ಪಿ-3 ರವರೆಗೆ ಗುರುತಿಸಲಾಯಿತು. ಸದ್ರಿ ಲಾರಿಯಲ್ಲಿ ನಮ್ಮ ಸರಕುಗಳೊಂದಿಗೆ ಬೇರೆ ಯಾವುದೇ ವಸ್ತುಗಳನ್ನು ಸಾಗಣೆ ಮಾಡಿರುವುದು ನಮಗೆ

ಗೊತ್ತಿರುವುದಿಲ್ಲ. ಅಬಕಾರಿ ಕಾಯ್ದೆಯನ್ನು ಉಲ್ಲಂಘಿಸಿ ಸಾಗಿಸಿದ ವಸ್ತುಗಳಲ್ಲಿ ನಾವು ಯಾವುದೇ ರೀತಿಯಲ್ಲಿ ಭಾಗಿಯಾಗಿರುವುದಿಲ್ಲವೆಂದು ಸಾಕ್ಷಿ ನೀಡಿರುತ್ತಾರೆ.

ಸಹಾಯಕ ಅಭಿಯೋಜನೆ ನಿರ್ದೇಶಕರು ಮಾಡಲಾದ ಪಾಟೀ ಸವಾಲಿಗೆ ಉತ್ತರವಾಗಿ ಬೆಂಗಳೂರಿನಿಂದ ಮಂಗಳೂರಿಗೆ ಸರಕು ಸಾಗಿಸಲು ಗೊತ್ತುಪಡಿಸಿದ ಲಾರಿಯ ಮಾಲೀಕರು ಗೊತ್ತಿರುವುದಿಲ್ಲ. ಸದ್ರಿ ಲಾರಿಯನ್ನು ಬೆಂಗಳೂರು ಬ್ರಾಂಚಿನಿಂದಲೇ ಗೊತ್ತುಪಡಿಸಲಾಗಿತ್ತು. ಅಬಕಾರಿ ಕಾನೂನನ್ನು ಉಲ್ಲಂಘಿಸಿ ಸರಕುಗಳನ್ನು ಸದ್ರಿ ಲಾರಿಯಲ್ಲಿ ಸಾಗಣೆ ಮಾಡಿರುವ ವಿಷಯ ನನಗೂ ತಿಳಿದಿತ್ತು ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಈ ಮೇಲಿನ ಹಿನ್ನೆಲೆಯಲ್ಲಿ ಸದ್ರಿ ಸ್ವತ್ತುಗಳು ಅಬಕಾರಿ ವಸ್ತುಗಳ ವ್ಯಾಪ್ತಿಯೊಳಗೆ ಬಾರದೇ ಇರುವುದರಿಂದ ಸದ್ರಿ ಸ್ವತ್ತುಗಳನ್ನು ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ಸ್, ಬೆಂಗಳೂರು ಇವರು ಸಂಬಂಧಪಟ್ಟ ಚಲನ್‌ಗಳ ಮೂಲಕ ಮಂಗಳೂರಿನ ತನ್ನದೇ ಆದ ಶಾಖೆಗೆ ಕಂಪೆನಿಯ ವೃತ್ತಿ ಧ್ಯೇಯದಂತೆ ಸಾಗಣೆ ಮಾಡುತ್ತಿದ್ದುದರಿಂದ ಸದ್ರಿ ಸ್ವತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಅವಶ್ಯಕತೆಯಿಲ್ಲವೆಂದು ಪ್ರಾಧಿಕಾರವು ಮನಗಂಡು ಅವುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳದೇ ಬಿಡುಗಡೆ ಮಾಡುವ ತೀರ್ಮಾನಕ್ಕೆ ಬಂದಿರುತ್ತದೆ.

ಅಲ್ಲದೆ ದಿನಾಂಕ: 9.4.99 ರಂದು ವಾಹನ ಸಂಖ್ಯೆ: ಸಿಆರ್‌ಎಕ್ಸ್-8635 ರಲ್ಲಿ ಅಕ್ರಮ ಮದ್ಯ ಸಾಗಣೆಯಾಗಿರುವುದು ಲಭ್ಯವಿರುವ ಸಾಕ್ಷಿಗಳು ಹಾಗೂ ದಾಖಲೆಗಳಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೆ ಇದ್ದು ಅಕ್ರಮ ಮದ್ಯವನ್ನು ಸಾಗಣೆ ಮಾಡುವಾಗ ತಾನೇ ಸ್ವತಃ ವಾಹನ ಚಾಲಕರಾಗಿದ್ದು ತನ್ನ ಸ್ವಂತ ತಿಳುವಳಿಕೆಯಿಂದಲೇ ಈ ಅಕ್ರಮ ಮದ್ಯ ಸಾಗಣೆಯಲ್ಲಿ ಭಾಗಿಯಾಗಿರುವುದು ಸ್ಪಷ್ಟವಾಗಿರುತ್ತದೆ. ಅಲ್ಲದೆ ತಾನು ನೀಡಿರುವ ವಿಳಾಸಕ್ಕೆ ಪ್ರಾಧಿಕಾರವು 9 ಬಾರಿ ನೋಂದಣಿ ಅಂಚೆ ಮೂಲಕ ಹಾಗೂ ಮುದ್ದಾಂ ನೋಟೀಸು ಜಾರಿಗೊಳಿಸಲು ಪ್ರಯತ್ನಿಸಲಾಗಿರುತ್ತದೆ. ಆದರೆ ನೋಂದಣಿ ಅಂಚೆ ಪತ್ರಗಳು ಜಾರಿಯಾಗದೇ ಹಿಂದೆ ಬಂದಿರುತ್ತದೆ. ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಲ್ಲದೆ ಈ ಹಿಂದೆ ಸದ್ರಿ ವಾಹನವು ಅಕ್ರಮ ಮದ್ಯ ಸಾಗಣೆ ಆರೋಪದ ಮೇಲೆ ಜಪ್ತುಗೊಳಿಸಲಾಗಿದ್ದು, ಸದ್ರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ. ಈ ಕಾರಣದಿಂದ ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರು ಉತ್ಸುಕರಾಗಿಲ್ಲವೆಂದೇ ತಿಳಿದು ಬರುತ್ತದೆ.

ಮೇಲ್ಕಾಣಿಸಿದ ಕಾರಣಗಳಿಂದ ಜಪ್ತಿಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು, ಉಳಿದ ಇತರೆ ವಸ್ತುಗಳು ಅಬಕಾರಿ ವಸ್ತುಗಳ ಪರಿಮಿತಿಯಲ್ಲಿ ಬಾರದೇ ಇರುವುದರಿಂದ ಅವುಗಳನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುವ ಆದೇಶಗಳನ್ನು ಖಾಯಂಗೊಳಿಸುವುದು ಉಚಿತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ

**ಆದೇಶ**

ಶ್ರೀ ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ ಆದ ನಾನು 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ದಾಖಲುಪಡಿಸಿರುವ ತಕ್ಷೀರು ಸಂಖ್ಯೆ: 17/98-99 ದಿನಾಂಕ: 9.4.99ರ ಮೂಲಕ ಜಪ್ತುಪಡಿಸಿದ ವಾಹನ ಲಾರಿ ಸಂಖ್ಯೆ:ಸಿಆರ್‌ಎಕ್ಸ್-8635ನ್ನು ಕರ್ನಾಟಕ ಸರಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಸದರಿ ಪ್ರಕರಣದಲ್ಲಿ ಜಪ್ತುಗೊಳಿಸಲಾದ ಅಬಕಾರಿ ವಸ್ತುಗಳಲ್ಲದ ಅಲ್ಟಾ ನೀಲಿ ಪಿಗ್ಮೆಂಟ್, ಬ್ಲೀಚಿಂಗ್ ಪೌಡರ್, ಫಿನೈಲ್, ರಾಸಾಯನಿಕ ಹಾಗೂ ಮೆಷಿನರಿ ಬಿಡಿಭಾಗಗಳ ಪೆಟ್ಟಿಗೆಗಳು ಇವುಗಳನ್ನು ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ: 1142:ಡಿಟಿಸಿಆರ್: 1998-99 ದಿನಾಂಕ: 11.5.99 ಮತ್ತು 24.6.1999ರ ಮೂಲಕ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ಖಾಯಂಗೊಳಿಸಿ ಆದೇಶ ನೀಡಿರುತ್ತೇನೆ.

**ಗೋವಿಂದಪ್ಪ**

ಅಧಿಕೃತ ಅಧಿಕಾರಿಗಳು, ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1 - ಶ್ರೀ ಕೆ. ನೀಲಯ್ಯ, ಅಬಕಾರಿ ನಿರೀಕ್ಷಕರು, ಇ.ಐ.ಬಿ., ಮಂಗಳೂರು ವಿಭಾಗ

ಪ್ರಾ.ಸಾ.2 - ಶ್ರೀ ಸೋಮೇಶ್ವರ, ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

ಪ್ರಾ.ಸಾ.3 - ಶ್ರೀ ವಿಠಲ ಶೆಟ್ಟಿ, ಅಬಕಾರಿ ರಕ್ಷಕ, ಕುಲಶೇಖರ ವಲಯ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಪ್ರಥಮ ವರ್ತಮಾನ ವರದಿಯ ಪ್ರತಿ

ನಿಶಾನೆ ಪಿ-2 - ಸೊತ್ತುಗಳ ಪಟ್ಟಿ

ನಿಶಾನೆ ಪಿ-3 - ಮಹಜರು ಪ್ರತಿ

ನಿಶಾನೆ ಪಿ-4 - ರಾಸಾಯನಿಕ ವರದಿಯ ಪ್ರತಿ

ಅನುಬಂಧ-3

ಫಿರ್ಯಾದುದಾರರ ಪರ ಅರ್ಜಿದಾರರು ಮಂಡಿಸಲಾದ ಸೊತ್ತುಗಳು:

ಡಿಡಬ್ಲ್ಯೂ-1 - ರಿಂದ ಡಿಡಬ್ಲ್ಯೂ-3: ಮಂಗಳೂರು ಬ್ರಾಂಚ್‌ಗೆ ತಲುಪಿಸಿದ ಚಲನ್‌ಗಳ ಜೆರಾಕ್ಸ್ ಪ್ರತಿಗಳು.

ಅನುಬಂಧ-4

ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:

ಡಿಡಬ್ಲ್ಯೂ-1 - ಶ್ರೀ ಜೋಗಿಂದರ್ ಶರ್ಮಾ (ಬ್ರಾಂಚ್ ಮ್ಯಾನೇಜರ್) ಮೆ: ಅಸೋಸಿಯೇಟೆಡ್ ರೋಡ್ ಕ್ಯಾರಿಯರ್ ಲಿ., ಮಂಗಳೂರು.

ಅನುಬಂಧ-5

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು -ಇಲ್ಲ -

ಗೋವಿಂದಪ್ಪ

ಪಿ.ಆರ್.469 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:1124:ಡಿಟಿಸಿಆರ್:98- 99 ದಿನಾಂಕ: 18ನೇ ಮಾರ್ಚ್ 2004**

**ಉಪಸ್ಥಿತರು :** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಿಭಾಗ, ಉಳ್ಳಾಲ, ಮಂಗಳೂರು

**ವಿರುದ್ಧ**

**ಆರೋಪಿಗಳು :**

1. ಕೆ. ಶ್ರೀನಿವಾಸ (ಪ್ರಾಯ 35 ವರ್ಷ) ಬಿನ್: ಕೇಶವ ಸಪಲ್ಯ, ಕೆರೆಬೈಲ್‌ಗುಡ್ಡೆ, ಪೆರ್ಮನ್ನೂರು ಗ್ರಾಮ, ಮಂಗಳೂರು ತಾಲ್ಲೂಕು.
2. ಬಾಬು ಡಿಸೋಜ (ಪ್ರಾಯ 27 ವರ್ಷ) ಬಿನ್: ಪೆಡ್ರು ಡಿಸೋಜ, ಚೆಂಬುಗುಡ್ಡೆ, ತೊಕ್ಕೊಟ್ಟು ಪೆರ್ಮನ್ನೂರು ಗ್ರಾಮ, ಮಂಗಳೂರು ತಾಲ್ಲೂಕು.
3. ಪೀಟರ್ ಡಿಸೋಜ (ಪ್ರಾಯ 28 ವರ್ಷ) ಬಿನ್ ಮಾರ್ಷಲ್ ಡಿಸೋಜ, ನಿತ್ಯಾನಂದ ನಗರ ಸೈಟ್, ಮುನ್ನೂರು ಗ್ರಾಮ, ಮಂಗಳೂರು ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 1.4.99 ರಂದು ಉಳ್ಳಾಲ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಅಕ್ರಮ ಸಾರಾಯಿ ಸಾಗಣೆಯ ಬಗ್ಗೆ ಜರೂರು ವರ್ತಮಾನದ ಮೇರೆಗೆ ಮಂಗಳೂರು ತಾಲ್ಲೂಕು ಪೆರ್ಮನ್ನೂರು ಗ್ರಾಮದ ಅಡಂಕುದ್ರು ಎಂಬಲ್ಲಿ ಶಾಲೆಯ ಎದುರುಗಡೆ ಎನ್. ಹೆಚ್-17 ರಲ್ಲಿ ವಾಹನ ತಪಾಸಣೆಗೆ ನಿಂತಿರುವಾಗ ಮಂಗಳೂರು ಕಡೆಯಿಂದ ತೊಕ್ಕೊಟ್ಟಿನ ಕಡೆಗೆ ಒಂದು ಆಟೋರಿಕ್ಷಾವು ಹೋಗುತ್ತಿರುವುದು ಕಂಡು ಬಂದಿದ್ದು, ಸಂಶಯದ ಮೇಲೆ ಆಟೋರಿಕ್ಷಾವನ್ನು ನಿಲ್ಲಿಸಿದಾಗ ಆಟೋದಲ್ಲಿ ಚಾಲಕ ಮತ್ತು ಇನ್ನಿಬ್ಬರು ಆಸಾಮಿಗಳು ಕುಳಿತಿದ್ದು, ಆಟೋ ಚಾಲಕನನ್ನು ಡಿಕ್ಕಿ ತೆರೆಯಲು ಸೂಚಿಸಿ ಡಿಕ್ಕಿಯನ್ನು ತೆರೆದು ಪರಿಶೀಲಿಸಲಾಗಿ ಡಿಕ್ಕಿಯಲ್ಲಿ ಒಂದು ಕಪ್ಪು ಬಣ್ಣದ ರಬ್ಬರ್ ಟ್ಯೂಬ್ ಇದ್ದು ಇದನ್ನು ಬಿಚ್ಚಿ ನೋಡಲಾಗಿ ಸದ್ರಿ ಟ್ಯೂಬಿನಲ್ಲಿ ಸುಮಾರು 30 ಲೀಟರ್ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂತು. ಸದ್ರಿ ಆಟೋರಿಕ್ಷಾದ ಸಂಖ್ಯೆ: ಸಿಎನ್‌ಜಿ-5719 ಇರುವುದು ಕಂಡು ಬಂದಿರುತ್ತದೆ. ರಿಕ್ಷಾ ಚಾಲಕನನ್ನು ಸಾರಾಯಿಯ ಬಗ್ಗೆ ದಾಖಲೆ ಪತ್ರಗಳನ್ನು ಕೇಳಲಾಗಿ ತನ್ನಲ್ಲಿ ಯಾವುದೇ ದಾಖಲೆ ಪತ್ರ ಇಲ್ಲ ಎಂದು ಸದ್ರಿ ಸಾರಾಯಿಯನ್ನು ರಿಕ್ಷಾದಲ್ಲಿ ಕುಳಿತಿರುವ ಇಬ್ಬರು ಆಸಾಮಿಗಳು ಡಿಕ್ಕಿಯಲ್ಲಿ ಇಟ್ಟಿರುವುದಾಗಿಯೂ, ಅದನ್ನು ಚೆಂಬುಗುಡ್ಡೆಯವರೆಗೆ ತಲುಪಿಸಲು ತಿಳಿಸಿರುವುದಾಗಿ, ತಿಳಿಸಿರುತ್ತಾನೆ. ನಂತರ ಸದ್ರಿ ಇಬ್ಬರು ಆಸಾಮಿಗಳನ್ನು ವಿಚಾರ ಮಾಡಲು ಸಾರಾಯಿಯನ್ನು ಚೆಂಬುಗುಡ್ಡೆಗೆ ಮಾರಾಟ ಮಾಡಲು ಕೊಂಡುಹೋಗುತ್ತಿರುವುದಾಗಿ, ಸದ್ರಿ ಸಾಗಣೆಗೆ ತಮ್ಮಲ್ಲಿ ಯಾವುದೇ ದಾಖಲೆ ಪತ್ರಗಳು ಇಲ್ಲವೆಂದು ತಿಳಿಸಿರುತ್ತಾರೆ. ನಂತರ ಅವರ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಚಾಲಕನು ತನ್ನ ಹೆಸರು ಕೆ. ಶ್ರೀನಿವಾಸ (ಪ್ರಾಯ 35 ವರ್ಷ), ಬಿನ್ ಕೇಶವ ಸಪಲ್ಯ, ಕೆರೆಬೈಲ್‌ಗುಡ್ಡೆ, ಪೆರ್ಮನ್ನೂರು ಗ್ರಾಮ, ಮಂಗಳೂರು ತಾಲ್ಲೂಕು ಎಂದು, ಎರಡನೇ ಆರೋಪಿ ತನ್ನ ಹೆಸರು ಬಾಬು ಡಿಸೋಜ (ಪ್ರಾಯ 27 ವರ್ಷ), ಬಿನ್ ಪೆಡ್ರು ಡಿಸೋಜ, ಚೆಂಬುಗುಡ್ಡೆ ತೊಕ್ಕೊಟ್ಟು, ಪೆರ್ಮನ್ನೂರು ಗ್ರಾಮ, ಮಂಗಳೂರು ತಾಲ್ಲೂಕು ಎಂದೂ ಮತ್ತು ಮೂರನೇ ಆರೋಪಿ ತನ್ನ ಹೆಸರು ಪೀಟರ್ ಡಿಸೋಜ (ಪ್ರಾಯ 28 ವರ್ಷ) ಬಿನ್ ಮಾರ್ಷಲ್ ಡಿಸೋಜ, ನಿತ್ಯಾನಂದ ನಗರ ಸೈಟ್, ಮುನ್ನೂರು ಗ್ರಾಮ, ಮಂಗಳೂರು ತಾಲ್ಲೂಕು ಎಂದು ತಿಳಿಸಿರುತ್ತಾರೆ. ಸಾಕ್ಷಿಗಾಗಿ ಸ್ಥಳೀಯರು ಯಾರೂ ದೊರಕದ ಕಾರಣ ಇಲಾಖೆಯ ಸಿಬ್ಬಂದಿಯನ್ನೇ ಸಾಕ್ಷಿದಾರರನ್ನಾಗಿಸಿಕೊಂಡು ದೊರೆತ ಕಳ್ಳಭಟ್ಟಿ ಸಾರಾಯಿಂದ ರಾಸಾಯನಿಕ ಪರೀಕ್ಷೆಗಾಗಿ 180 ಮಿಲಿಯನ್ನು ಒಂದು ಬಾಟ್ಲಿಗೆ ಹಾಕಿ, ಮಾದರಿ ಬಾಟ್ಲಿಗೂ ಹಾಗೂ ರಬ್ಬರು ಟ್ಯೂಬಿಗೂ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಿ ಮಾದರಿ ಸೀಲ್‌ಗಳನ್ನು ತಯಾರಿಸಿ ಆರೋಪಿಗಳ ಹೆಸರು ವಿಳಾಸವಿರುವ ಗುರುತಿನ ಚೀಟಿಗಳನ್ನು ಟ್ಯೂಬಿಗೂ, ಮಾದರಿ ಶೀಷೆ ಹಾಗೂ ರಿಕ್ಷಾಕ್ಕೂ ಅಂಟಿಸಿ ನಂತರ ಎಲ್ಲಾ ಸ್ವತ್ತುಗಳನ್ನು ಆರ್.ಸಿ. ಸಮೇತ ಸರ್ಕಾರಕ್ಕೆ ವಶಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿರುತ್ತಾರೆ. ಇದು ಅಬಕಾರಿ ಕಾಯ್ದೆ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 34 ಮತ್ತು 38(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಪ್ರಕರಣವನ್ನು ಸಂಖ್ಯೆ:

14/4/98-99 ದಿನಾಂಕ: 1.4.99ರ ಮೂಲಕ ದಾಖಲಿಸಿ ಮಹಜರು ಮತ್ತು ಪ್ರಥಮ ಮಾಹಿತಿಯನ್ನು ನ್ಯಾಯಾಲಯಕ್ಕೂ, ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ಪ್ರಕರಣದ ಮುಂದಿನ ತನಿಖೆಯ ಬಗ್ಗೆ ಪ್ರಕರಣವನ್ನು ಸ್ವತ್ತುಗಳೊಂದಿಗೆ ಕಂಕನಾಡಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 12.4.99 ರಂದು ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿ ಅರ್ಜಿಯನ್ನು ತಳ್ಳಿ ಹಾಕಿ ಈ ಪ್ರಾಧಿಕಾರವು ದಿನಾಂಕ: 20.5.99 ರಂದು ಆದೇಶ ನೀಡಿರುತ್ತದೆ. ಪ್ರಾಧಿಕಾರವು ನೀಡಿದ ಆದೇಶದ ವಿರುದ್ಧ ವಾಹನ ಮಾಲೀಕರು 1ನೇ ಹೆಚ್ಚುವರಿ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಜಿಲ್ಲಾ 1ನೇ ಹೆಚ್ಚುವರಿ ಸತ್ರ ನ್ಯಾಯಾಲಯವು ರೂ. 5,000/- ಗಳ ಬ್ಯಾಂಕ್ ಗ್ಯಾರಂಟಿ ಹಾಗೂ ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡ್‌ನ್ನು ಪಡೆದು ವಾಹನವನ್ನು ಮಧ್ಯಂತರ ಬಿಡುಗಡೆಗೆ ಆದೇಶ ನೀಡಿರುತ್ತಾರೆ. ಮಾನ್ಯ 1ನೇ ಹೆಚ್ಚುವರಿ ಸತ್ರ ನ್ಯಾಯಾಲಯದ ಆದೇಶದಂತೆ ದಿನಾಂಕ: 23.12.99 ರಂದು ಪ್ರಾಧಿಕಾರವು ಮಾನ್ಯ ಸತ್ರ ನ್ಯಾಯಾಲಯವು ವಿಧಿಸಿದ ಷರತ್ತುಗಳಿಗೆ ಅನುಸರಿಸಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಮೂರು ಸಾಕ್ಷಿಗಳನ್ನು ಹಾಗೂ ಪತ್ರಿ ರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರವಾಗಿ ಒದಗಿಸಲಾಗಿರುವ ಸಾಕ್ಷಿಗಳ ಆಧಾರದಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 1.4.99 ರಂದು ವಾಹನ ಆಟೋರಿಕ್ಷಾ ಸಂ: ಸಿಎನ್‌ಜಿ-5719 ರಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟ ಮಾಡಲಾಗಿತ್ತೇ?
2. ಸದ್ರಿ ವಾಹನದ ಮಾಲೀಕರು ತಾನೆಂದು ಮತ್ತು ಸದ್ರಿ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ತನ್ನ ತಿಳುವಳಿಕೆಗೆ ಬಾರದೇ ಮಾಡಲಾಗಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿರುವ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ, ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ.1:**

ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಿಭಾಗ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ: 5.12.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಅವರು ದಿನಾಂಕ: 1.04.99 ರಂದು ತಮ್ಮ ಸಿಬ್ಬಂದಿಯೊಂದಿಗೆ ಮಂಗಳೂರು ತಾಲ್ಲೂಕು ಪೆರ್ಮನ್ನೂರು ಗ್ರಾಮದ ಅಡಂಕುದ್ರು ಮೇನ್ ರೋಡಿನಲ್ಲಿ ವಾಹನದ ತಪಾಸಣೆಗೆಂದು ನಿಂತಿರುವಾಗ ಮಂಗಳೂರು ಕಡೆಯಿಂದ ಒಂದು ರಿಕ್ಷಾ ಉಳ್ಳಾಲದ ಕಡೆಗೆ ಹೋಗುತ್ತಿರುವುದು ಕಂಡು ಬಂತು. ಸಂಶಯದಿಂದ ಸದ್ರಿ ರಿಕ್ಷಾವನ್ನು ನಿಲ್ಲಿಸಿ ನೋಡಲಾಗಿ ರಿಕ್ಷಾದ ಹಿಂದಿನ ಸೀಟಿನಲ್ಲಿ 2 ಜನ ಕುಳಿತಿದ್ದರು. ನಂತರ ಡ್ರೈವರನ್ನು ವಿಚಾರಿಸಿ ರಿಕ್ಷಾ ಡಿಕ್ಕಿಯನ್ನು ನೋಡಲಾಗಿ ಒಂದು ರಬ್ಬರು ಟ್ಯೂಬ್ ಕಂಡು ಬಂತು. ನಂತರ ಟ್ಯೂಬನ್ನು ಪರಿಶೀಲಿಸಲಾಗಿ ಅದರಲ್ಲಿ 30 ಲೀಟರ್ ಕಳ್ಳಭಟ್ಟಿ ಸಾರಾಯಿ ಇತ್ತು. ನಂತರ ಚಾಲಕನನ್ನು ಮತ್ತು ರಿಕ್ಷಾದಲ್ಲಿರುವವರನ್ನು ವಿಚಾರಿಸಲಾಗಿ ಸದ್ರಿ ಸಾರಾಯಿ ಸಾಗಾಟ ಮಾಡಲು ಯಾವುದೇ ಪರ್ಮಿಟ್ ವಗೈರೆ ಇರುವುದಿಲ್ಲ ಎಂದು ತಿಳಿಸಿದರು. ಸದ್ರಿ ಶರಾಬನ್ನು ಚೆಂಬುಗುಡ್ಡೆಗೆ ಸಾಗಿಸುವುದಾಗಿ ತಿಳಿಸಿದರು. ರಿಕ್ಷಾದಲ್ಲಿದ್ದವರ ಹೆಸರು ವಿಳಾಸವನ್ನು ವಿಚಾರಿಸಿದೆವು. ಅಲ್ಲಿ ಯಾವುದೇ ಸಾರ್ವಜನಿಕರು ಇಲ್ಲದೇ ಇದ್ದುದರಿಂದ ಇಲಾಖೆಯವರನ್ನೇ ಸಾಕ್ಷಿದಾರರನ್ನಾಗಿಸಿಕೊಂಡು ಯಾದಾಸ್ತು ತಯಾರಿಸಿದೆ. ಸದ್ರಿ ಟ್ಯೂಬಿನಿಂದ 180 ಮಿಲಿ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆಂದು ಮಾದರಿ ತೆಗೆದು ಟ್ಯೂಬಿಗೂ ಹಾಗೂ ಮಾದರಿ ಶೀಷೆಗೂ ಬಟ್ಟೆದಾರ ಕಟ್ಟಿ ಕಛೇರಿಯ ಸೀಲ್ ಹಾಕಿದೆವು. ಮಾದರಿ ಸೀಲನ್ನು ತಯಾರಿಸಿ ಬಾಟ್ಲಿ ಮತ್ತು ಟ್ಯೂಬಿನ ಮೇಲೆ ಗುರುತಿನ ಚೀಟಿ ಅಂಟಿಸಿದೆನು. ಆರೋಪಿತರನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿದೆನು. ಸಾರಾಯಿಯನ್ನು ಮತ್ತು ವಾಹನವನ್ನು ವಶಪಡಿಸಿಕೊಂಡು ಉಳ್ಳಾಲ ಕಛೇರಿಗೆ ಬಂದು ಪ್ರಕರಣವನ್ನು ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು ಪ್ರತಿಯನ್ನು ನೋಡಿ ಈಗ ಗುರುತಿಸಿದೆನು, ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ತಯಾರಿಸಿದ ಪಂಚನಾಮೆ ಪ್ರತಿಯನ್ನು ನೋಡಿ ಗುರುತಿಸಿದೆನು. ಅದರ ಮೇಲೆ ನನ್ನ ಸಹಿ ಇದೆ, ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಈ ಕುರಿತು ಒಂದು ವರದಿಯನ್ನು ಅಬಕಾರಿ ಉಪ ಆಯುಕ್ತರವರಿಗೆ ಸಲ್ಲಿಸಿರುತ್ತೇನೆ. ಅದನ್ನು ಈಗ ಗುರುತಿಸಿರುತ್ತೇನೆ, ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಪ್ರಕರಣವನ್ನು ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ವರ್ತಮಾನ ತಲುಪಿದ ನಂತರ ಯಾವುದೇ ಸ್ವತಂತ್ರ ಸಾಕ್ಷಿಯನ್ನು ಕರೆದುಕೊಂಡು ಬಂದಿಲ್ಲ. ಇಲಾಖೆಯ ಜೀಪ್‌ನಲ್ಲಿ ಬೆಳಿಗ್ಗೆ 11.00 ಗಂಟೆಗೆ ಬಂದೆವು. ಈ ಪ್ರಕರಣಕ್ಕೆ ಸಂಬಂಧಿಸಿದ ಆಟೋರಿಕ್ಷಾವನ್ನು ಪರಿಶೀಲಿಸುವ ಮೊದಲು ಕೆಲವು ವಾಹನಗಳನ್ನು ಪರಿಶೀಲನೆ ಮಾಡಿದ್ದೇನೆ. ಸುಮಾರು 1.00 ಗಂಟೆಯವರೆಗೆ ತಕ್ಷೀರಿನ ಸ್ಥಳದಲ್ಲಿ ಇದ್ದೆವು. ತಕ್ಷೀರು ಸ್ಥಳದಲ್ಲಿ ಯಾವುದೇ ಅಂಗಡಿ, ಶಾಲೆ ಇಲ್ಲ. ತಕ್ಷೀರು ಸ್ಥಳವು ಜನನಿಬಿಡ ಸ್ಥಳವಲ್ಲ. ಆದರೆ ವಾಹನ ಸಂಚಾರ ಇರುತ್ತದೆ. ರಿಕ್ಷಾದಲ್ಲಿ ಇದ್ದ 2 ಜನರ ಹೇಳಿಕೆಯನ್ನು ಪಡೆದಿರುವುದಿಲ್ಲ. ಸ್ಥಳ ಮಹಜರನ್ನು ತಾನು ಸ್ವತಹ ಬರೆದಿರುತ್ತೇನೆ. ಅಬಕಾರಿ ರಕ್ಷಕ ಶ್ರೀ ಅಂಗಾರ ಇವರು ಮಾದರಿ ಸೀಲನ್ನು ತಯಾರಿಸಿದರು. ಸಾರಾಯಿ ಇದ್ದ ಟ್ಯೂಬ್ ಯಾವ ವಾಹನದ್ದು ಎಂದರೆ ಹೇಳಲು ಸಾಧ್ಯವಿಲ್ಲ. ಈ ರೀತಿ ಟ್ಯೂಬ್‌ಗಳು ವಾರಸುದಾರರಿಲ್ಲದೆ ಇದ್ದು ಸಿಗುತ್ತವೆ ಎಂದರೆ ತನಗೆ ಗೊತ್ತಿಲ್ಲ. ಮಹಜರನ್ನು ಕಛೇರಿಯಲ್ಲಿ ತಯಾರಿಸಿದೆ ಎಂದರೆ ಸರಿಯಲ್ಲ. ತಕ್ಷೀರು ಸ್ಥಳಕ್ಕೆ ಹೋಗಿಲ್ಲ, ತಕ್ಷೀರು ಸ್ಥಳದಲ್ಲಿ ಆರೋಪಿತರನ್ನು ದಸ್ತಗಿರಿ ಮಾಡಿಲ್ಲ ಎಂದರೆ ಸರಿಯಲ್ಲ. ಪ್ರಕರಣದಲ್ಲಿ ಆರೋಪಿಗಳಿಗೆ ಬಿಡುಗಡೆಯಾಗಿದೆ

ಎಂಬ ವಿಷಯ ಗೊತ್ತಿಲ್ಲ ಮತ್ತು ಸುಳ್ಳು ಪ್ರಕರಣವನ್ನು ದಾಖಲಿಸಿದೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿ ಹೇಳಿಕೆಯಿಂದ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಯು. ರಘುಪತಿ ಭಟ್, ಅಬಕಾರಿ ರಕ್ಷಕ, ಉಳ್ಳಾಲ ಉಪ ವಲಯ ಇವರು ದಿನಾಂಕ: 5.12.2002 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 17.4.99 ರಂದು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಶೀಷೆಯನ್ನು ಕೋರಿಕೆ ಪತ್ರದೊಂದಿಗೆ ರಾಸಾಯನಿಕ ತಜ್ಞರಿಗೆ ಅದೇ ದಿನ ತಲುಪಿಸಿದ್ದು ದಿನಾಂಕ: 26.4.99 ರಂದು ತಜ್ಞರ ವರದಿ ಹಾಗೂ ಮಾದರಿ ಶೀಷೆಯನ್ನು ರಾಸಾಯನಿಕ ತಜ್ಞರಿಂದ ಪಡೆದು ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ತಲುಪಿಸಿರುವುದಾಗಿ ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ಪಾಟೀ ಸವಾಲಿಗೆ ತಾನು ದಿನಾಂಕ: 1.4.99 ರಂದು ತಕ್ಷೀರು ಸ್ಥಳಕ್ಕೆ ಹೋಗಿಲ್ಲ ಎಂದು ತಿಳಿಸಿರುತ್ತಾರೆ.

**ಪ್ರಾ.ಸಾ-3:**

ಶ್ರೀ ಹೆಚ್. ಪುಟ್ಟಸ್ವಾಮಿ, ಅಬಕಾರಿ ಉಪ ನಿರೀಕ್ಷಕರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು ಅವರು ದಿನಾಂಕ: 3.4.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ಅವರು ಈ ಪ್ರಕರಣಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಉಳ್ಳಾಲ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರಿಂದ ಪಡೆದುಕೊಂಡು ಪ್ರಕರಣದ ಮಾದರಿ ಶೀಷೆಯನ್ನು ಅಬಕಾರಿ ರಕ್ಷಕ ಶ್ರೀ ಯು. ರಘುಪತಿ ಭಟ್ ಇವರ ಮೂಲಕ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿದ್ದು ದಿನಾಂಕ: 26.4.99 ರಂದು ರಾಸಾಯನಿಕ ವರದಿಯನ್ನು ಪಡೆದುಕೊಂಡು ಪ್ರಕರಣದ ತನಿಖೆಯನ್ನು ಮುಗಿಸಿ ಆರೋಪಿತರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರ ನೀಡುತ್ತ ತಾನು ಈ ಪ್ರಕರಣದಲ್ಲಿ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಾಕ್ಷಿ ನೀಡಿರುವುದಿಲ್ಲ. ಈ ಪ್ರಕರಣದಲ್ಲಿ ಆರೋಪಿಗೆ ಬಿಡುಗಡೆ ಆಗಿರುವುದು ತನಗೆ ತಿಳಿದಿಲ್ಲ. ಪ್ರಕರಣದ ತನಿಖೆಯನ್ನು ಸರಿಯಾಗಿ ಮಾಡದೆ ಸುಳ್ಳು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆಂದರೆ ಮತ್ತು ತಕ್ಷೀರಿಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಾ.ಸಾ-1, ಪ್ರಾ.ಸಾ-2 ಮತ್ತು ಪ್ರಾ.ಸಾ-3ರ ಸಾಕ್ಷಿ ಹೇಳಿಕೆಯ ಪ್ರಕಾರ ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಕಳ್ಳಭಟ್ಟಿ ಸಾರಾಯಿಯ ಮಾದರಿ ಶೀಷೆಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ರಾಸಾಯನಿಕ ವಿಶ್ಲೇಷಣಾ ವರದಿಯಂತೆ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣವು ಶೇ. 27.10 ಇದ್ದು ಇದು ಮಾದಕ ದ್ರವ್ಯವೆಂದು ಸಾಬೀತಾಗಿರುವುದರಿಂದ ದಿನಾಂಕ: 1.4.99 ರಂದು ವಾಹನ ಆಟೋರಿಕ್ಷಾ ಸಂಖ್ಯೆ: ಸಿಎನ್‌ಜಿ-5719ರಲ್ಲಿ 30 ಲೀಟರ್ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆ ಆಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು ಪರಿಗಣಿಸಿದೆ.

**ಡಿ.ಡಬ್ಲ್ಯೂ-1**

ಶ್ರೀ ಶ್ರೀನಿವಾಸ, ಬಿನ್ ಕೇಶವ ಸಪಲ್ಯ ಇವರು ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದ ಮಾಲೀಕರಾಗಿದ್ದು ಈ ಪ್ರಾಧಿಕಾರದ ಮುಂದೆ ದಿನಾಂಕ: 28.8.2003 ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ತನ್ನ ವಿರುದ್ಧ ಇದ್ದ ಕ್ರಿಮಿನಲ್ ಮೊಕದ್ದಮೆಯಲ್ಲಿ ಅಂತಿಮವಾಗಿ ಬಿಡುಗಡೆಯಾಗಿದೆ ಎಂದು ತಿಳಿಸುತ್ತಾ ನ್ಯಾಯಾಲಯದ ಆದೇಶದ ಪ್ರತಿಯನ್ನು ಹಾಜರುಪಡಿಸಿರುತ್ತಾರೆ. ದಿನಾಂಕ: 1.4.99 ರಂದು ನಾನು ತೊಕ್ಕೊಟ್ಟಿನ ಚೆಕ್ ಪೋಸ್ಟ್ ಬಳಿಯಿದ್ದಾಗ ಅಬಕಾರಿ ಅಧಿಕಾರಿಗಳು ತನ್ನಲ್ಲಿಗೆ ಬಂದು ನನ್ನ ಆಟೋರಿಕ್ಷಾವನ್ನು ಅಬಕಾರಿ ಕಛೇರಿಗೆ ತರಲು ತಿಳಿಸಿದರು. ಅಲ್ಲಿ ನನ್ನ ಆಟೋರಿಕ್ಷಾವನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿದರು. ನನ್ನನ್ನು ಕೂಡಾ ಅಲ್ಲಿ ಬಂಧಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ ಎಂದು ಸಾಕ್ಷಿ ನೀಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಗ ನಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ತನ್ನ ಆಟೋರಿಕ್ಷಾದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟ ಮಾಡುವಾಗ ಅಬಕಾರಿ ಅಧಿಕಾರಿಗಳು ನನ್ನ ರಿಕ್ಷಾವನ್ನು, ನನ್ನನ್ನು ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ವಶಪಡಿಸಿಕೊಂಡರೆಂದರೆ ಸರಿಯಲ್ಲ. ನಾನು ನನ್ನ ರಿಕ್ಷಾವನ್ನು ಅಕ್ರಮ ಸಾಗಾಟಕ್ಕೆ ಉಪಯೋಗಿಸಿದ್ದರಿಂದಲೇ ನನ್ನ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಲಾಗಿತ್ತೆಂದರೆ ಸರಿಯಲ್ಲ ಮತ್ತು ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ನುಡಿದಿರುತ್ತಾರೆ.

ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ತಮ್ಮ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 1.4.99 ರಂದು ತೊಕ್ಕೊಟ್ಟಿನ ಚೆಕ್ ಪೋಸ್ಟ್ ಬಳಿಯಿದ್ದಾಗ ಅಬಕಾರಿ ಅಧಿಕಾರಿಗಳು ನನ್ನಲ್ಲಿಗೆ ಬಂದು ಆಟೋರಿಕ್ಷಾವನ್ನು ಅಬಕಾರಿ ಕಛೇರಿಗೆ ತರಲು ತಿಳಿಸಿದರು. ಕಛೇರಿಯಲ್ಲಿ ತನ್ನ ಆಟೋರಿಕ್ಷಾವನ್ನು ವಶಪಡಿಸಿಕೊಂಡರು ಎಂದು ಹೇಳಿಕೆ ನೀಡಿರುತ್ತಾರೆ. ಆದರೆ ದಿನಾಂಕ: 12.4.99 ರಂದು ಜಪ್ತುಪಡಿಸಲಾದ ವಾಹನದ ಮಧ್ಯಂತರ ಬಿಡುಗಡೆಗಾಗಿ ಈ ಪ್ರಾಧಿಕಾರಕ್ಕೆ ನೀಡಿರುವ ಅರ್ಜಿಯಲ್ಲಿ ದಿನಾಂಕ: 1.4.99 ರಂದು ನನ್ನ ಆಟೋರಿಕ್ಷಾದಲ್ಲಿ ಪ್ರಯಾಣ ಮಾಡುತ್ತಿದ್ದ ಇಬ್ಬರು ಪ್ರಯಾಣಿಕರು ತನ್ನ ತಿಳುವಳಿಕೆಗಿಲ್ಲದೇ ಕಳ್ಳಭಟ್ಟಿ ಸಾರಾಯಿಯನ್ನು ಆಟೋರಿಕ್ಷಾದ ಡಿಕ್ಕಿಯಲ್ಲಿ ಇಟ್ಟುಕೊಂಡಿರಬಹುದೆಂದು, ಈ ಕಾರಣ ತನ್ನ ಆಟೋರಿಕ್ಷಾವು ಮುಟ್ಟುಗೋಲು ಪ್ರಕ್ರಿಯೆಗೆ ಬಾಧಿತವಾಗಿಲ್ಲವೆಂದು ಹಾಗೂ ಈ ಅಕ್ರಮ ಸಾಗಾಟಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಅವರು ಪ್ರಾಧಿಕಾರದ ಮುಂದೆ ದಿನಾಂಕ: 1.4.99 ರಂದು ತಾನು ತೊಕ್ಕೊಟ್ಟಿನ ಚೆಕ್ ಪೋಸ್ಟ್ ಬಳಿಯಿದ್ದಾಗ ಅಬಕಾರಿ ಅಧಿಕಾರಿಗಳು ತನ್ನ ಆಟೋರಿಕ್ಷಾವನ್ನು ಕಛೇರಿಗೆ ತರಲು ತಿಳಿಸಿದರೆಂದು, ತನ್ನ ಆಟೋರಿಕ್ಷಾವನ್ನು ಅಬಕಾರಿ ಕಛೇರಿಯಲ್ಲಿ ವಶಪಡಿಸಿಕೊಂಡರು ಎಂದು ತಿಳಿಸಿರುತ್ತಾರೆ. ಈ ಕಾರಣದಿಂದ ವಾಹನ ಮಾಲೀಕರು ದಿನಾಂಕ:

28.8.03 ರಂದು ಪ್ರಾಧಿಕಾರದ ಮುಂದೆ ನುಡಿದಿರುವುದು ಅಪ್ಪಟ ಕಟ್ಟುಕಥೆ ಹಾಗೂ ಸುಳ್ಳು ಸಾಕ್ಷಿಯಾಗಿರುತ್ತದೆ ಎಂಬುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಈ ಅಪರಾಧವು ತಮ್ಮ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುದನ್ನು ಸ್ಪಷ್ಟಪಡಿಸುವ, ಸಾಬೀತುಪಡಿಸುವ ಜವಾಬ್ದಾರಿ ವಾಹನ ಮಾಲೀಕರದ್ದಾಗಿದ್ದು, ಈ ದಿಸೆಯಲ್ಲಿ ಅವರು ವಿಫಲರಾಗಿರುತ್ತಾರೆ. ತಾವೇ ಸ್ವತಃ ತಮ್ಮ ತಿಳುವಳಿಕೆಯಿಂದಲೇ ದಿನಾಂಕ: 1.4.99 ರಂದು ವಾಹನವನ್ನು ಚಾಲನೆ ಮಾಡುತ್ತಿದ್ದು ಈ ಅಪರಾಧವು ತಾವೇ ಸ್ವತಃ ತಮ್ಮ ತಿಳುವಳಿಕೆಯಿಂದಲೇ ಎಸಗಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುವುದರಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದಲ್ಲಿ 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54 ರಡಿಯಲ್ಲಿ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆದಿರುವುದಿಲ್ಲ, ಹಾಗೂ ಪಡೆಯದಿರುವುದಕ್ಕೆ ಕಾರಣಗಳನ್ನು ನಮೂದಿಸಿ ಸರ್ಚ್ ಮೆಮೋವನ್ನು ತಯಾರಿಸಿರುವುದಿಲ್ಲ. ಈ ಕ್ರಮವನ್ನು ಕೈಗೊಳ್ಳದೇ ಇದ್ದ ಕಾರಣಕ್ಕಾಗಿ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿರುವುದು ಕಾನೂನು ಬಾಹಿರವಾಗುತ್ತದೆಯೇ ಎಂಬ ಪ್ರಶ್ನೆ. ಈ ಕುರಿತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಬಹುದಾಗಿದೆ. ಐ.ಎಲ್.ಆರ್-2004 ಕರ್ನಾಟಕ 527 ರಲ್ಲಿ ವರದಿಯಾದ "ಪ್ರಕರಣ" ಸೋಮನಾಥ ಕೆರೆಬೈಲ್ ವಿರುದ್ಧ ಸರ್ಕಾರ ಅಬಕಾರಿ ಉಪ ಆಯುಕ್ತರು, ಬೆಳಗಾಂ ಜಿಲ್ಲೆ ಈ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅಬಕಾರಿ ಕಾಯ್ದೆ ಕಲಂ 54ರ ಅಡಿಯ ಪ್ರಕ್ರಿಯೆಯನ್ನು ಅನುಸರಿಸುವಲ್ಲಿ ಅಧಿಕಾರಿಗಳು ವಿಫಲವಾದರೆ, ಕರ್ನಾಟಕ ಅಬಕಾರಿ ಕಾಯ್ದೆಯನ್ನು ಉಲ್ಲಂಘಿಸಿದ ಕಾರಣಕ್ಕಾಗಿ ವಶಪಡಿಸಿಕೊಂಡಿರುವ ಯಾವುದೇ ಅಬಕಾರಿ ವಸ್ತು ಕಾನೂನು ಬಾಹಿರವಾಗುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಈ ಮೇಲೆ ವ್ಯಕ್ತಪಡಿಸಿರುವ ಅಭಿಪ್ರಾಯದಂತೆ ಪ್ರಸ್ತುತ ಪ್ರಕರಣದಲ್ಲಿ ಕಲಂ 54ರ ಪ್ರಕ್ರಿಯೆಯನ್ನು ಅನುಸರಣೆ ಮಾಡದೇ ಇದ್ದರೂ ಜಪ್ತುಗೊಳಿಸಿರುವ ವಾಹನ ಕಾನೂನು ಬಾಹಿರವಾಗುವುದಿಲ್ಲ ಹಾಗೂ ಮುಟ್ಟುಗೋಲು ಪ್ರಕರಣಕ್ಕೆ ಯಾವುದೇ ರೀತಿಯ ಧಕ್ಕೆಯುಂಟಾಗುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 1124:ಡಿಟಿಸಿಆರ್:98-99 ದಿನಾಂಕ: 18ನೇ ಮಾರ್ಚ್ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ: 14/4/98-99 ದಿನಾಂಕ: 1.4.99 ರಲ್ಲಿ ವಶಪಡಿಸಿಕೊಂಡಿರುವ ಆಟೋರಿಕ್ಷಾ ಸಂ: ಸಿಎನ್‌ಜಿ-5719 ನ್ನು ನಿಯಮ 43ಎ(2) ರನ್ವಯ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 18.3.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1 - ಶ್ರೀ ಪಿ.ಎ. ವಿಜಯನ್, ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಿಭಾಗ, ಉಳ್ಳಾಲ.
ಪ್ರಾ.ಸಾ.2 - ಶ್ರೀ ಯು. ರಘುಪತಿ ಭಟ್, ಅಬಕಾರಿ ರಕ್ಷಕ, ಉಳ್ಳಾಲ ಉಪವಲಯ, ಉಳ್ಳಾಲ.
ಪ್ರಾ.ಸಾ.3 - ಶ್ರೀ ಹೆಚ್. ಪುಟ್ಟಸ್ವಾಮಿ, ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪವಲಯ, ಉಳ್ಳಾಲ

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಪ್ರಥಮ ಮಾಹಿತಿ ವರದಿಯ ಪ್ರತಿ
ನಿಶಾನೆ ಪಿ-2 - ಪಂಚನಾಮೆ ಪ್ರತಿ
ನಿಶಾನೆ ಪಿ-3 - ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ ವರದಿಯ ಪ್ರತಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:**

ಡಿಡಬ್ಲ್ಯೂ-1 - ಕೆ. ಶ್ರೀನಿವಾಸ (ಪ್ರಾಯ 35 ವರ್ಷ), ಬಿನ್ ಕೇಶವ ಸಪಲ್ಯ, ಕೆರೆಬೈಲ್‌ಗುಡ್ಡೆ, ಪೆರ್ಮನ್ನೂರು ಗ್ರಾಮ, ಮಂಗಳೂರು ತಾಲ್ಲೂಕು

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲ

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್.470

## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ಇವರ ನ್ಯಾಯಾಲಯದಲ್ಲಿ

**ಸಾರ್ವಜನಿಕ ಪ್ರಕಟಣೆ**

**ಸಂ:ಎಫ್‌ಓಸಿ:ಅರಣ್ಯ:ವಾಹನಮುಟ್ಟುಗೋಲು:03-04**

ಹಳಿಯಾಳ ಅರಣ್ಯ ವಿಭಾಗ ವ್ಯಾಪ್ತಿಯ ವಿವಿಧ ಸ್ಥಳಗಳಲ್ಲಿ ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆ ಮಾಡುತ್ತಿದ್ದಾಗ ವಿವಿಧ ವಾಹನಗಳನ್ನು ಈ ಕೆಳಕಂಡ ದಿನಾಂಕಗಳಂದು ಸಿಬ್ಬಂದಿ ಜನರು ಅರಣ್ಯ ಮಾಲು ಸಮೇತ ವಾಹನವನ್ನು ಜಪ್ತಿಪಡಿಸಿ ಮೊಕದ್ದಮೆ ದಾಖಲಿಸಿ ವಶಪಡಿಸಿಕೊಂಡಿರುತ್ತಾರೆ ಹಾಗೂ ಸದರಿ ವಾಹನಗಳಲ್ಲಿನ ಅರಣ್ಯ ಉತ್ಪನ್ನ ಸಮೇತ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಸದರಿ ವಾಹನಗಳ ಮಾಲಿಕರು ಯಾರೂ ಸಹ ಈವರೆಗೆ ವಾಹನ ಮಾಲಿಕತ್ವದ ಬಗ್ಗೆ ಈ ನ್ಯಾಯಾಲಯವನ್ನು ಸಂಪರ್ಕಿಸಿರುವುದಿಲ್ಲ. ಈ ಕೆಳಕಂಡ ವಾಹನಗಳ ಮಾಲಿಕರು ಅಥವಾ ವಾರಸುದಾರರು ಯಾರಾದರೂ ಇದ್ದಲ್ಲಿ ಅಥವಾ ತಕರಾರು ಸಮಜಾಯಿಸಿ, ಏನಾದರೂ ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 30 ದಿನಗಳೊಳಗೆ ಸಂಬಂಧಿಸಿದ ದಾಖಲೆಗಳ ಸಹಿತ ಈ ನ್ಯಾಯಾಲಯದ ಮುಂದೆ ಹಾಜರುಪಡಿಸುವುದು. ತಪ್ಪಿದಲ್ಲಿ ಈ ವಾಹನಗಳ ಮಾಲಿಕರು ಅಥವಾ ವಾರಸುದಾರರು ಯಾರು ಇಲ್ಲವೆಂದು ಹಾಗೂ ಅರಣ್ಯ ಅಪರಾಧದಲ್ಲಿ ಭಾಗಿಯಾಗಿ, ಅನಧಿಕೃತವಾಗಿ ಅರಣ್ಯ ಉತ್ಪನ್ನ ಸಾಗಿಸಲು ಉಪಯೋಗಿಸಲಾಗಿದೆಯೆಂದು ಪರಿಗಣಿಸಿ ಏಕಪಕ್ಷೀಯವಾಗಿ ತೀರ್ಮಾನ ತೆಗೆದುಕೊಂಡು ಕರ್ನಾಟಕ ಅರಣ್ಯ ನಿಯಮ 1963ರ ಸೆಕ್ಷನ್ 71(ಎ) ರೀತ್ಯ ವಾಹನ ಹಾಗೂ ಜಪ್ತಿ ಪಡಿಸಿದ ಅರಣ್ಯ ಸೊತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರ. ಸಂ. | ಸ್ಥಳ ದಿನಾಂಕ | ವಶಪಡಿಸಿಕೊಂಡ ಅರಣ್ಯ ಉತ್ಪನ್ನ ಹಾಗೂ ಪ್ರಮಾಣ | ವಶಪಡಿಸಿಕೊಂಡ ವಾಹನ ಸಂಖ್ಯೆ ಹಾಗೂ ಮಾದರಿ | ಪತ್ತೆ ಹಚ್ಚಿದ ಅಧಿಕಾರಿಗಳು/ ಸಿಬ್ಬಂದಿ | ಅಪರಾಧಿ ಸಂಖ್ಯೆ. | ಶರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಮಾವಳಿಂಗ, ದಾಂಡೇಲಿ ವಲಯ 9.7.2003 | ಸಾಗ ನಗ 5=0.286 | ಬಜಾಜ್ ಆಟೋರಿಕ್ಷಾ ಕೆಎ-31/858 | ಅರಣ್ಯ ರಕ್ಷಕ, ಮಾವಳಿಂಗ | 5/2003-04 | |
| 2. | ಅಖೇತಿ, ತಿನ್ನೈಘಾಟ ವಲಯ 7.11.2003 | ಬೆತ್ತಗಳು 23000 ಸಂ | ಸಿಎನ್‌ಎಲ್-6629 | ವನಪಾಲಕ, ಕರಂಬಳ | 2/2003-04 | |
| 3. | ಜಿ. ಜಿ. ಕಾಳಗಿನಕೊಪ್ಪ ಸಾಂಬ್ರಾಣಿ ವಲಯ, 12.8.2002 | ಸಾಗ ಹಲಗೆ 4=0.020 | ಬಜಾಜ್ ಎಂ. 80 ನೋಂದಣಿ ಸಂಖ್ಯೆ ಇಲ್ಲ | ಅರಣ್ಯ ರಕ್ಷಕ, ಕಾಳಗಿನಕೊಪ್ಪ | 2/2002-03 | ಸದರಿ ವಾಹನಕ್ಕೆ ನೊಂದಣಿ ಸಂಖ್ಯೆ ಇರುವುದಿಲ್ಲ |
| 4. | ವಲಯ ಅರಣ್ಯಾಧಿಕಾರಿ, ಬರ್ಚಿವಲಯ | ಸಾಗಗಿಡ | ಟ್ರಕ್ ನಂ.ಎಂವೈಡಬ್ಲ್ಯೂ -7605 | ವ.ಅ.ಅ. ಬರ್ಚಿ | 1/2001-02 | |
| 5. | ವಲಯ ಅರಣ್ಯಾಧಿಕಾರಿ, ಬರ್ಚಿವಲಯ | ಸಾಗಗಿಡ | ಟ್ರಕ್ ನಂ. ಸಿಎನ್‌ಜಿ-4248 | ವ.ಅ.ಅ. ಬರ್ಚಿ | 1/2001-02 | |

ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

ಪಿ.ಆರ್. 471

## ತಹಶೀಲ್ದಾರ್‌ರವರ ಕಾರ್ಯಾಲಯ, ಮಂಡ್ಯ ತಾಲ್ಲೂಕು, ಮಂಡ್ಯ

**ನಮೂನೆ-38**

**(ನಿಯಮ 118 ಮತ್ತು 124)**

**(1) ಜಪ್ತಿ ಮಾಡಲ್ಪಟ್ಟ ಸ್ವತ್ತಿನ ಹರಾಜು ಬಗೆಗಿನ ಇಸ್ತಿಹಾರ್ ಮತ್ತು ಬರಹದ ಮೂಲಕ ವಾದನೋಟೀಸಿನ ನಮೂನೆ**

**ನಂ:ಟಿಪಿಬಿ: ಸಿಆರ್:41:84-85 ದಿನಾಂಕ: 24ನೇ ಫೆಬ್ರವರಿ 2004**

ಶ್ರೀ ಸಿ. ರಾಜಮಲ್ಲಯ್ಯ ಬಿನ್ ವೆಂಕಟಯ್ಯ ಇವರಿಂದ ಸಲ್ಲಿಸಬೇಕಾದ 57,99,922 ರೂಪಾಯಿಗಳ ಅಬ್ಕಾರಿ ಬಾಕಿ ಹಣದ ಬಾಬ್ತು ಸದರಿ ಶ್ರೀ ಸಿ. ರಾಜಮಲ್ಲಯ್ಯ ಬಿನ್ ವೆಂಕಟಯ್ಯ ಅವರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ವತ್ತು ಜಪ್ತಿ ಮಾಡಲ್ಪಟ್ಟಿರುವುದರಿಂದ ಮತ್ತು ಸದರಿ ಮೊಬಲಗನ್ನು ಸದರಿ ಸ್ವತ್ತಿನ ಜಪ್ತಿಯಿಂದ ಮತ್ತು ಮಾರಾಟದಿಂದ ಉಂಟಾದ ನ್ಯಾಯ ಸಮ್ಮತ್ತದ ಸಮನ್ಸ್ ಖರ್ಚುಗಳ ಮತ್ತು ವೆಚ್ಚಗಳ ಸಹಿತ ಸದರಿ ಸ್ವತ್ತಿನ ಮಾರಾಟದ ಮೂಲಕ ವಸೂಲು ಮಾಡುವುದು ಅವಶ್ಯಕವಾಗಿರುವುದರಿಂದ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿನಾಂಕ: 20.3.2004 ರಂದು ಬೆಳಿಗ್ಗೆ 11.00 ಗಂಟೆಗೆ ಮಂಡ್ಯ ತಹಶೀಲ್ದಾರ್‌ರು (ಅಥವಾ ನೇಮಕ ಮಾಡಲ್ಪಟ್ಟ ಇತರೆ ವ್ಯಕ್ತಿಯು) ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಕಸಬಾ ಮಂಡ್ಯಸಿಟಿ ಹೊಸ ಬಸ್‌ನಿಲ್ದಾಣದ ಬಳಿ ಈ ಕೆಳಗೆ ನಮೂದಿಸಲ್ಪಟ್ಟ ಸ್ವತ್ತಿನ ಸಂಬಂಧವಾಗಿ ಶ್ರೀ ಸಿ. ರಾಜಮಲ್ಲಯ್ಯ ಬಿನ್ ವೆಂಕಟಯ್ಯ ಅವರ ಹಕ್ಕನ್ನು ಪಟ್ಟಿಯನ್ನು ಮತ್ತು ಪ್ರಯೋಜನದಾರರ

ಮತ್ತು ಸದರಿಯವರು ತಮ್ಮ ಸ್ವಂತ ಪ್ರಯೋಜನಕ್ಕಾಗಿ ಕಾನೂನಿಗನುಸಾರವಾಗಿ ಈಗ ಸುಸಂಗತವಾಗಿ ಚಲಾಯಿಸಬಹುದಾದಂತಹ ಹಕ್ಕು ಪಟ್ಟಿ ಮತ್ತು ಪ್ರಯೋಜನಾಂಶವನ್ನು ಅಥವಾ ಅವುಗಳ ಪೈಕಿ ಯಾವುದಾದರೊಂದನ್ನು ಅಥವಾ ಅವುಗಳಿಂದಾಗಿ ಉಂಟಾಗುವ ಲಾಭತೆಗಳನ್ನು ವಿಲೇ ಮಾಡುವ ಸಮಸ್ತ ಅಧಿಕಾರವನ್ನು ಅನಿರ್ಬಂಧವಾಗಿ ಹರಾಜಿನ ಮೂಲಕ ಹೆಚ್ಚು ಬೆಲೆಗೆ ಕೊಡುವವರಿಗೆ ಮಾರಾಟ ಮಾಡುವುದು.

| | | | |
|---|---|---|---|
| ಸ್ಥಿರ ಸ್ವತ್ತಿನ ವಿವರ | | : | ಮಂಡ್ಯ ಸಿಟಿ ಮುನಿಸಿಪಲ್ ಖಾತೆ ನಂ.81,914, 1090:2 ಏ |
| ಸ್ವತ್ತಿನ ಅಳತೆ | | : | 100x60 ನಿವೇಶನ |
| ಚಕ್ಕುಬಂದಿ | 1) ಉತ್ತರಕ್ಕೆ | : | ಹೊಸ ಬಸ್‌ಸ್ಟಾಂಡ್ |
| | 2) ದಕ್ಷಿಣಕ್ಕೆ | : | ಮೈಸೂರು- ಬೆಂಗಳೂರು ರಸ್ತೆ, |
| | 3) ಪೂರ್ವಕ್ಕೆ | : | ಎಂ. ಸಿ. ಬಾಲಕೃಷ್ಣ ಮಂಡ್ಯರವರ ಅಂಗಡಿ ಮಳಿಗೆ |
| | 4) ಪಶ್ಚಿಮಕ್ಕೆ | : | ಬಸ್‌ಸ್ಟಾಂಡ್ ರಸ್ತೆ ( ಈ ಮಧ್ಯ ಇರುವ ಮಂಗಳೂರು ಹೆಂಚಿನ ಮನೆ ಮತ್ತು ಕಾಂಪೌಂಡ್) |

**ಹರಾಜಿನ ಷರತ್ತುಗಳು:**

1. 20.3.2004ನೇ ದಿನಾಂಕದಂದು ಹರಾಜಿಗೆ ಇಟ್ಟಿರುವ ಮನೆಯ ಮುಂಭಾಗದಲ್ಲಿ ಹರಾಜು ನಡೆಸಲಾಗುವುದು ಅವಶ್ಯಕವಾದರೆ ವಿದ್ಯೂಷಣೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಿರಸ್ವತ್ತು ಮಾರಾಟವಾಗುವವರೆಗೆ (ರಜಾ ದಿನಗಳು ಹೊರತು) ದಿನಾಂಕವನ್ನು ಹರಾಜನ್ನು ಮುಂದುವರಿಸುವ ಅಧಿಕಾರವನ್ನು ತಹಶೀಲ್ದಾರ್‌ರವರು ಹೊಂದಿರುತ್ತಾರೆ.
2. ಯಾವ ಹಣದ ವಸೂಲಿಯ ಸಲುವಾಗಿ ಸ್ಥಿರ ಸ್ವತ್ತನ್ನು ಮಾರಾಟ ಮಾಡಲಾಗುತ್ತದೆಯೋ ಅದರ ಹಣವನ್ನು ಪಡೆಯಲು ಹಕ್ಕುಳ್ಳ ವ್ಯಕ್ತಿ ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೆ ಹರಾಜಿನಲ್ಲಿ ಸವಾಲು ಮಾಡಲು ಅಥವಾ ಸ್ವತ್ತಿನಲ್ಲಿ ಖರೀದಿಮಾಡಲು ಅವಕಾಶವಿರುವುದಿಲ್ಲ.
3. ಯಾವ ಹಣದ ವಸೂಲಿಗಾಗಿ ಸ್ಥಿರ ಸ್ವತ್ತನ್ನು ಹರಾಜು ಮಾಡಲಾಗುತ್ತಿದೆಯೋ ಅಂತಹ ಹಕ್ಕು ವ್ಯಕ್ತಿಯು ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೆ ತಾನಾಗಲೀ ಅಥವಾ ಇತರೆ ವ್ಯಕ್ತಿಯ ಮೂಲಕವಾಗಲೀ ಖರೀದಿ ಮಾಡಿದರೆ ಮಾರಾಟದಿಂದ ಯಾವ ಹಿತಾಸಕ್ತಿಗೆ ಧಕ್ಕೆ ಉಂಟಾಗಿದೆಯೋ ಆ ಬಾಕಿದಾರರನ್ನು ಅಥವಾ ಯಾವನೇ ಇತರ ವ್ಯಕ್ತಿಯ ಅರ್ಜಿಯ ಮೇಲೆ ತಹಶೀಲ್ದಾರರು ಎಂದು ಮನಗಂಡ ಪಕ್ಷದಲ್ಲಿ ಆದೇಶದ ಮೂಲಕ ಆ ಹರಾಜನ್ನು ತಳ್ಳಿಹಾಕಬಹುದು. ಆ ರೀತಿ ತಳ್ಳಿ ಹಾಕುವುದರಿಂದ ಉಂಟಾಗಬಹುದಾದ ನಷ್ಟವನ್ನು ಮತ್ತು ಅಂತಹ ಅರ್ಜಿಯ ಹಾಗೂ ಅದರ ಖರ್ಚುಗಳನ್ನು ಯಾವುದಕ್ಕಾಗಿ ಹರಾಜನ್ನು ನಡೆಸಲಾಗಿದೆಯೋ ಅಂತಹ ವ್ಯಕ್ತಿಯು ಸಂದಾಯ ಮಾಡಬೇಕಾಗಿರುತ್ತದೆ.
4. ಹರಾಜನ್ನು ನಡೆಸಲು ನೇಮಕ ಹೊಂದಿರುವ ಯಾವುದೇ ಅಧಿಕಾರಿಯು ಮತ್ತು ಅಂತಹ ಅಧಿಕಾರಿಯು ಅತ್ಯಂತ ಹೆಚ್ಚಿನ ಸವಾಲನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ವಿವೇಚನೆಯನ್ನು ಹೊಂದಿರುತ್ತಾರೆ.
5. ಹರಾಜನ್ನು ನಡೆಸಲು ನೇಮಕ ಹೊಂದಿರುವ ಯಾವುದೇ ಅಧಿಕಾರಿಯು ಮತ್ತು ಅಧಿಕಾರಿಯು ನೇಮಿಸಿರುವ ಅವರಿಗೆ ಅಧೀನವಾಗಿರುವ ಯಾವನೇ ವ್ಯಕ್ತಿಯು ಪ್ರತ್ಯಕ್ಷವಾಗಲೀ ಪರೋಕ್ಷವಾಗಲೀ ಆ ಸ್ವತ್ತಿನ ಬಗ್ಗೆ ಸವಾಲು ಮಾಡತಕ್ಕದ್ದಲ್ಲ ಅಥವಾ ಕೊಂಡು ಕೊಳ್ಳತಕ್ಕದ್ದಲ್ಲ.
6. ಹರಾಜಿನ ದಿನಾಂಕದಂದು ಯಾವ ಸವಾಲು ಇಲ್ಲದಿದ್ದರೆ ಸ್ವತ್ತನ್ನು ಸರ್ಕಾರವು ಖರೀದಿ ಮಾಡಬಹುದಾಗಿರುತ್ತದೆ.
7. ಹರಾಜಿನಲ್ಲಿ ಸವಾಲು ಮಾಡುವ ಇಚ್ಛೆಯುಳ್ಳ ಪ್ರತಿಯೊಬ್ಬ ಸವಾಲುದಾರರು ಮುಂಗಡದ ಹರಾಜಿನ ವೇಳೆಗೆ ಮೊದಲು 5000-00 ರೂ.ಗಳನ್ನು ಠೇವಣಿ ಕಟ್ಟಿ ಹರಾಜಿನಲ್ಲಿ ಭಾಗವಹಿಸಬೇಕಾಗಿರುತ್ತೆ. ಮತ್ತು ಅಂತಿಮ ಸವಾಲುದಾರರು ಹರಾಜು ಆದ ಕೂಡಲೇ ಸವಾಲಿನ ಮೇರೆಗೆ ನಿರ್ದೇಶಿಸಿದೆ. ಶೇಕಡ 25 ರಷ್ಟು ಹರಾಜು ಮುಗಿದ ಕೂಡಲೇ ಸ್ಥಳದಲ್ಲಿ ಪಾವತಿ ಮಾಡಿ ಉಳಿಕೆ ಹಣವನ್ನು ಪೂರ್ಣಗೊಂಡ ಹದಿನೈದು ದಿವಸದೊಳಗಾಗಿ ಪಾವತಿ ಮಾಡತಕ್ಕದ್ದು. ತಪ್ಪಿದಲ್ಲಿ ಆಸ್ತಿಯನ್ನು ಪುನಃ ಬಹಿರಂಗವಾಗಿ ಹರಾಜು ಮಾಡಲಾಗುವುದು ಮತ್ತು ಹಣ ಪಾವತಿ ಮಾಡಲು ತಪ್ಪಿದ ಸವಾಲುದಾರರ ಠೇವಣಿ ಹಣವಾದ 5000-00 ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಸಂದಾಯ ಮಾಡಲ್ಪಟ್ಟ ತಪ್ಪಿದ ಕಾರಣದಿಂದ ಅದು ಮರು ಹರಾಜಿನಲ್ಲಿ ಉಂಟಾಗಬಹುದಾದ ನಷ್ಟ ಹಾಗೂ ಹರಾಜಿನ ಸಂಬಂಧದಲ್ಲಿ ತಗಲುವ ವೆಚ್ಚವನ್ನು ಭೂ ಕಂದಾಯದ ಬಾಕಿಯಂತೆ ಹಣ ಸಂದಾಯ ಮಾಡಲು ತಪ್ಪಿದ್ದಲ್ಲಿ ಖರೀದಿದಾರನಿಂದ ವಸೂಲಿ ಮಾಡಲಾಗುತ್ತೆ.

ಮಾರಾಟವು ಮಂಡ್ಯ ಜಿಲ್ಲಾಧಿಕಾರಿಯವರ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತೆ. ಮಾರಾಟವನ್ನು ಸ್ಥಿರೀಕರಿಸಿದ ತರುವಾಯ ಯಶಸ್ವಿಸವಾಲುದಾರರ ಹೆಸರಿನಲ್ಲಿ ಖರೀದಿಸಲು ಪ್ರಮಾಣಪತ್ರ ಕೊಡಲಾಗುವುದು ಹಾಗೂ ನೋಂದಣಿ ಅಧಿಕಾರಿಗಳಲ್ಲಿ ಅಖೈರು ಬಿಡ್ಡುದಾರರು ನೋಂದಣಿ ಫೀ ಸಂದಾಯ ಮಾಡಿ ನೋಂದಣಿ ಮಾಡಿಸಿಕೊಳ್ಳುವುದು.

ಪಿ.ಆರ್. 472 ತಹಶೀಲ್ದಾರ್, ಮಂಡ್ಯ ತಾಲ್ಲೂಕು.

## IN THE COURT OF THE AUTHORISED OFFICER AND DEPUTY CONSERVATOR OF FORESTS, DAVANAGERE DIVISION, DAVANAGERE

## NOTIFICATION

**No. A2/71-(A)-FOC/CR-21/03-04 Dated: 4th March 2004.**

Karnataka Forest Department staff and Police staff in Davanagere jurisdiction seized the following vehicles while transporting Sandalwood illegally and produced before the authorised officer to initiate proceedings according to 71 (a) of Karnataka Forest Act 1963.

**Details of the vehicles as follows:**

| Sl. No. | Forest/Police Crime No. | Vehicle Particulars | Engine No. | Chassis No. | Qty of Sandal | Remarks |
|---|---|---|---|---|---|---|
| 1 | Honnali Police crime No.9/99 | Maruti Esteem Car PY-01 H 6642 | G 13 BIN 559519 HT | MA 3 EBE 14500195575 | 150 Kgs | - |
| 2 | Harihara Town Crime No. 60/98 | Maruthi Van PY-01-H 7301 | F 8 B IN 1371356 | ST 91 IN 168322 | 125 Kgs | |

It is noticed that till today nobody has claimed before this authority, regarding the ownership of above said vehicles. Hence, if anybody has any claims or rights about ownership of the above vehicle they may do so with in 30 days of Publication in Government of Karnataka Gazzette with relevant documents to claim the vehicles. In case nobody shall claim the ownership. Thereafter action shall be taken to confiscate the vehicle accordance with section 71(A) of Karnataka Forest Act 1963.

**B. GOPALNAIK**

PR-473 Authorised Officer & Deputy Conservator of Forests, Davanagere Division, Davanagere.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-4**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-23/ 2003 ದಿನಾಂಕ: 24ನೇ ಮಾರ್ಚ್ 2004**

**ಅರ್ಜಿದಾರರು :** 1) ಶ್ರೀಮತಿ ಅಕ್ತರ್ ಬೇಗಮ್ W/o ಲೇಟ್ ಅನ್ವರ್ ಪಾಷ 2) ಸಯ್ಯದ್ ಮೆಹಬೂಬ್ 3) ಮಬೀನತಾಜ್ 4) ಚೋಟಿವರಾ 5) ಸಯ್ಯದ್ ಶಬ್ಬೀರ್ 6) ಫರ್‌ಜಾನ ಬಾನು 7) ಹೇನಾತಾಜ್ 8) ಸಯ್ಯದ್ ತಬ್ರಜಾ R/o ಹಿಂದು ಮುಸ್ಲಿಂ ಗುರುಮಠ ಐಜೂರ್ ಗುಡ್ಡೆ, ರಾಮನಗರ ಟೌನ್ ಬೆಂ.ಗ್ರಾ. ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀ ಕಾಲಹ S/o ರಫೀದ್ ಐಜೂರು ಮೊಹಲ್ಲಾ ರಾಮನಗರ ಟೌನ್ ಬೆಂಗಳೂರು ಗ್ರಾ. ಜಿಲ್ಲೆ.
2. ಮೆ: ಇಂಡಿಯಾ ಅಶ್ಯೂರೆನ್ಸ್ ಕಂ. ಲಿ. ನಂ. 40 ಲಕ್ಷ್ಮಿ ಕ್ರಾಂಪ್ಲೆಕ್ಸ್, ವಾಣಿವಿಲಾಸ ಹಾಸ್ಪಿಟಲ್ ಎದುರು ಕೆ.ಆರ್.ರೋಡ್ ಪೋಟ್‌ಜಿ ಒ-1 ಬೆಂಗಳೂರು

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಅಕ್ತರ್ ಬೇಗಮ್ ಮತ್ತು ಇತರೇ 7 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ದಿವಗಂತ ಲೇಟ್ ಅನ್ವರ್ ಪಾಷಾ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು
ಪಿ.ಆರ್. 474 ಉಪ-ವಿಭಾಗ 4, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1,**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಡೈರಿ ಸರ್ಕಲ್ ಹತ್ತಿರ, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್:-22/93 ದಿನಾಂಕ: 10ನೇ ಮಾರ್ಚ್ 2004**

**ಅರ್ಜಿದಾರರು :** ಶ್ರೀ ರಂಗಸ್ವಾಮಿ, ಬಿನ್ ಶ್ರೀ ಅಣ್ಣಯ್ಯನವರ ಮಗ, ಕೇರಾಫ್ ಶ್ರೀಮತಿ ಜಯಮ್ಮ, ನಂ. 382, ಮಸೀದಿ ರಸ್ತೆ, ಮರಿಯಪ್ಪನಪಾಳ್ಯ, ಬೆಂಗಳೂರು

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀಮತಿ ಲಕ್ಷ್ಮೀಬಾಯಿ, ಶ್ರೀ ಕಾಂತರಾಜ್ ಅವರ ಹೆಂಡತಿ, ರಾಜಭವನ ಸ್ವೀಟ್ಸ್, ನಂ. 48:1, 7ನೇ ಕ್ರಾಸ್, ಗಂಗಾನಗರ, ಬೆಂಗಳೂರು.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ನಂ. 67/1, ರೆಡ್ಡಿ ಕಾಂಪ್ಲೆಕ್ಸ್, ವೈಟ್ ಫೀಲ್ಡ್ ರಸ್ತೆ, ಮಹದೇವಪುರ ಪೋಸ್ಟ್, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ಹೇಳಲಾದ ಅರ್ಜಿದಾರರು ದಿನಾಂಕ: 3.7.93 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ತಾವು ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ದಿನಾಂಕ: 18.9.90 ರಂದು ಅಪಘಾತ ಸಂಭವಿಸಿ, ಗಾಯಗಳನ್ನು ಹೊಂದಿರುತ್ತದೆ ಎಂದು ತಿಳಿಸಿ, ಕಾಯ್ದೆಯನ್ವಯ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಮುಂದುವರೆಯುತ್ತಾ ಸದರಿ ಅರ್ಜಿದಾರರು ದಿನಾಂಕ: 22.11.2001 ರಂದು ಮತ್ತೊಂದು ಅಪಘಾತದಲ್ಲಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಶ್ರೀಮತಿ ಪುಟ್ಟಮ್ಮ, 34 ವರ್ಷ, ದಿವಂಗತ ರಂಗಸ್ವಾಮಿಯವರ ಹೆಂಡತಿ, ಮಾ. ಸಂತೋಷ್, 14 ವರ್ಷ, ಮೃತ ರಂಗಸ್ವಾಮಿಯವರ ಮಗ, ಹಾಗೂ ಕು. ಲಾವಣ್ಯ, 12 ವರ್ಷ, ಮೃತ ರಂಗಸ್ವಾಮಿಯವರ ಮಗಳು,-ಇವರುಗಳು ಮೃತನ ವಾರಸುದಾರರು ಎಂದು ಹೇಳಿ ಮೃತ ದಿನಾಂಕ: 18.9.90 ರಂದು ಹೊಂದಿರುವ ಗಾಯಗಳಿಗೆ ಬರಬೇಕಾದ ಪರಿಹಾರದ ಹಣವನ್ನು ವಾರಸುದಾರರಾದ ತಮಗೆ ವಿತರಿಸುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 475

**ಮೊಹಮ್ಮದ್ ಯುಸುಫ್**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಬೆಂಗಳೂರು-29.

## ಪ್ರಧಾನ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು

**ದಿನಾಂಕ: 17ನೇ ಮಾರ್ಚ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಪ್ರಧಾನ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಮತ್ತು ಹೆಚ್ಚುವರಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ತಿಪಟೂರು ನ್ಯಾಯಾಲಯಗಳಲ್ಲಿ ದಾಖಲಾಗಿ ವಿಲೇವಾರಿಯಾದಂತಹ ಕೇಸುಗಳಲ್ಲಿ ವಾರಸುದಾರರು ಇಲ್ಲದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶವಾಗಿರುವಂತಹ ಈ ಕೆಳಕಂಡ ವಾಹನಗಳನ್ನು ಅವುಗಳು ಈಗ ಹೇಗಿದೆಯೋ ಆ ಸ್ಥಿತಿಯಲ್ಲಿ ದಿನಾಂಕ: 7.5.2004 ರಂದು ಬೆಳಿಗ್ಗೆ 11.00 ಗಂಟೆಗೆ ನ್ಯಾಯಾಲಯದ ಆವರಣದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳವರು ಹಾಜರಿದ್ದು ಹರಾಜು ಕರೆಯಬಹುದು. ನ್ಯಾಯಾಲಯದವರು ಒಪ್ಪಿಕೊಂಡ ಹೆಚ್ಚಿನ ಬಿಡ್ ಮಾಡಿದ ಹರಾಜುದಾರರು ಪೂರ್ತಿ ಹಣವನ್ನು ಸ್ಥಳದಲ್ಲಿಯೇ ಪಾವತಿ ಮಾಡಿ ಮಾಲನ್ನು ಪಡೆಯಬಹುದು. ಸ್ಥಳದಲ್ಲಿ ಪೂರ್ತಿ ಹಣವನ್ನು ಪಾವತಿ ಮಾಡದಿದ್ದರೆ ಅಂತಹವರ ಹರಾಜನ್ನು ರದ್ದುಪಡಿಸಿ ಎರಡನೇ ಬಾರಿ ಹರಾಜು ಮಾಡಲಾಗುವುದು. ಹರಾಜು ಒಪ್ಪಿಕೊಳ್ಳುವುದು, ತಿರಸ್ಕರಿಸುವುದು ಈ ಕೆಳಗೆ ಸಹಿ ಮಾಡಿರುವವರಿಗೆ ಪೂರ್ಣ ಅಧಿಕಾರವಿರುತ್ತದೆ.

| ಕ್ರ. ಸಂ. | ಕೇಸು ನಂ. | ಪಿ.ಆರ್. ನಂ. | ವಾಹನಗಳ ವಿವರ |
|---|---|---|---|
| 1. | ಸಿಸಿ 1125/00 | 80/01 | ಬಜಾಜ್ ಸ್ಕೂಟರ್ ಕೆಎ-02: ಆರ್ 9361 |
| 2. | ಸಿಸಿ 1157/00 | 35/01 | ಲೂನಾ ರಿ.ನಂ. ಕೆಎ-06: ಎಚ್ 3100 |
| 3. | ಸಿಸಿ 1025/01 | 207/01 | ಲೂನಾ ಸೂಪರ್ ರಿ.ನಂ.ಇಲ್ಲ ಚಾಸೀಸ್ 96ಎಂ-13085427 ಇಂಜಿನ್ ನಂಬರ್ 1311600. |
| 4. | ಸಿಸಿ 316/00 | 64/02 | ಹಿರೋಪುಚ್ ರಿ.ನಂ. ಇಲ್ಲ, ಚಾಸೀಸ್ ನಂ. 6ಎ 50214, ಇಂಜಿನ್ ನಂಬರು ಇಎ:95401. |
| 5. | ಸಿಸಿ 771/02 | 140/02 | ಯಮಹ ಆರ್‌ಎಕ್ಸ್-100 ರಿ.ನಂ. ಇಲ್ಲ ಇಂಜಿನ್ ನಂಬರು: ILI: 450539 ಚಾಸೀಸ್ ನಂಬರು: L 1450539 H94. |
| 6. | ಸಿಸಿ 290/02 | 36/03 | ಹಿರೋಹೊಂಡ ಸಿಡಿ-100 ಮೋಟಾರು ಸೈಕಲ್ |

ಪ್ರಧಾನ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು

ಪಿ.ಆರ್. 476 ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಅಧಿಸೂಚನೆ**

**ನಂ.ಎಲ್‌ಆರ್‌ಎಫ್(ಕಲಂ109) ಸಿಆರ್:07:2003-04 ದಿನಾಂಕ: 19ನೇ ಮಾರ್ಚ್ 2004**

ಬಂಗಾರಪೇಟೆ ತಾಲ್ಲೂಕು, ಕಸಬಾ ಹೋಬಳಿ, ಅನಿಗಾನಹಳ್ಳಿ ಗ್ರಾಮದ ಸ.ನಂ. 95 ರಲ್ಲಿ 2-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಶಿಕ್ಷಕರ ತರಬೇತಿ ಸಂಸ್ಥೆ ಸ್ಥಾಪನೆಗಾಗಿ) ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಅಧ್ಯಕ್ಷರು, ಇಂಡಿಜೀನಸ್ ಪೀಪಲ್ ಎಜುಕೇಷನಲ್ ಟ್ರಸ್ಟ್ (ರಿ) ಹಂಚಾಳ ಗೇಟ್, ಬಂಗಾರಪೇಟೆ ತಾಲ್ಲೂಕು ರವರು ನಮೂನೆ-15 ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಬಂಗಾರಪೇಟೆ ತಾಲ್ಲೂಕು ರವರು ಪತ್ರ ಸಂಖ್ಯೆ LRF CR-13/2003-04 ದಿನಾಂಕ: 27.02.2004 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್‌ಆರ್‌ಎಫ್‌ಸಿಆರ್ 11: 2003-04 ದಿನಾಂಕ:8.3.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತದೆ. ಮೇಲ್ಕಂಡ ಜಮೀನಿನ ಖಾತೆ ಶ್ರೀಮತಿ ಎ. ಸರಳಾವತಿ ಬಿನ್ ಅಸೀರಪ್ಪ ಎಂಬುವರ ಹೆಸರಿನಲ್ಲಿದ್ದು ಈ ಜಮೀನು ರಿ.ನಂ. 3609/97-98 ದಿನಾಂಕ: 18.2.1998 ರಂತೆ ಕ್ರಯ ಮೂಲಕ ಬಂದಿರುತ್ತೆ. ಮೇಲ್ಕಂಡ ಜಮೀನನ್ನು ಅರ್ಜಿದಾರರಿಗೆ ದಾನವಾಗಿ ನೀಡಲು ಒಪ್ಪಿ ಸದರಿ ಎ. ಸರಳಾವತಿ ರವರು ದಿನಾಂಕ: 26.12.2003 ರಂದು ದಾನದ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಮತ್ತು ಇನಾಂ ರದ್ದಿಯಾತಿ ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಹಾಗೂ ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ ನಿಯಮ ಪಿ.ಟಿ.ಸಿ.ಎಲ್. ಕಾಯ್ದೆಗಳ ಉಲ್ಲಂಘನೆಯಾಗಿರುವುದಿಲ್ಲ.

ಮೇಲ್ಕಂಡ ಟ್ರಸ್ಟ್ ಮೂಲಕವಾಗಿ ನಂ. 31/2001-02 ದಿನಾಂಕ: 25.04.2001 ರಂತೆ ಉಪ ನೋಂದಣಾಧಿಕಾರಿಗಳು. ಗಾಂಧಿನಗರ, ಬೆಂಗಳೂರು ಇವರ ಕಛೇರಿಯಲ್ಲಿ ನೋಂದಾವಣೆಯಾಗಿರುತ್ತದೆ. ನಂತರ ತಿದ್ದುಪಡಿಯಾಗಿ ಸಂಖ್ಯೆ: 393/2003-04 ದಿನಾಂಕ: 26.12.2003 ರಂತೆ ಕೇಂದ್ರ ಸ್ಥಾನಿಕ ಉಪ ನೋಂದಣಾಧಿಕಾರಿಗಳು, ಗಾಂಧಿನಗರ, ಬೆಂಗಳೂರು ರವರ ಕಛೇರಿಯಲ್ಲಿ ನೋಂದಣಿಯಾಗಿರುತ್ತದೆ. (AMENDMENT DEED) ಹಾಗೂ ವಿಳಾಸವನ್ನು ಬೆಂಗಳೂರಿನಿಂದ ಹಂಚಾಳ ಗೇಟ್, ಬಂಗಾರಪೇಟೆ ತಾಲ್ಲೂಕು ಇಲ್ಲಿಗೆ ಬದಲಾವಣೆ ಮಾಡಿಕೊಂಡಿರುತ್ತಾರೆ. ಸರ್ಕಾರಿ ಆದೇಶ ಸಂಖ್ಯೆ: ED 154 PTI 2003 (523) ಬೆಂಗಳೂರು ದಿನಾಂಕ: 29.10.2003 ರಂತೆ ಮೇಲ್ಕಂಡ ಟ್ರಸ್ಟ್‌ನವರಿಗೆ ಬಂಗಾರಪೇಟೆ ತಾಲ್ಲೂಕು ಹಂಚಾಳ ಗೇಟ್‌ನಲ್ಲಿ ಶಿಕ್ಷಕರ ತರಬೇತಿ ಕೇಂದ್ರವನ್ನು (45 (ನಲವತ್ತೈದು) ಜನ ವಿದ್ಯಾರ್ಥಿಗಳೊಂದಿಗೆ) ಸ್ಥಾಪಿಸಲು ನಿರಾಕ್ಷೇಪಣಾ ಪತ್ರ ನೀಡಿರುತ್ತೆ.

ದಿನಾಂಕ: 12.3.2004 ರಂದು ನಾನು ಮೇಲ್ಕಂಡ ಜಮೀನಿನ ಸ್ಥಳ ತನಿಖೆ ಮಾಡಿರುತ್ತೇನೆ ಮೇಲ್ಕಂಡ ಜಮೀನು ಶೈಕ್ಷಣಿಕ ಸಂಸ್ಥೆ ನಡೆಸಲು ಸೂಕ್ತವಾದ ಪ್ರದೇಶವಾಗಿರುತ್ತೆ. ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸಿಕೊಳ್ಳಬೇಕಾಗಿರುವ ಬಾಬುಗಳು ಯಾವುದೂ ಇರುವುದಿಲ್ಲ. ಈ ಜಮೀನಿನಲ್ಲಿ ಹೈ ಪವರ್ ಟೆನ್ಷನ್ ಲೈನ್ ಹಾದು ಹೋಗಿರುವುದಿಲ್ಲ. ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಅನುಮತಿಯನ್ನು ನೀಡುವ ವಿಚಾರದಲ್ಲಿ ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲ.

ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (i) (ii) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ ನಾಲ್ಕು ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅನುಮತಿ ನೀಡಲು ಸರ್ಕಾರಕ್ಕೆ ಅವಕಾಶವನ್ನು ಕಲ್ಪಿಸಿರುತ್ತೆ. ಈ ಸಂಬಂಧ ಸರ್ಕಾರಿ ಅಧಿಸೂಚನೆ ನಂ. ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002 ರಂತೆ) ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ವರೆಗೆ ಜಮೀನನ್ನು ಖರೀದಿಸಲು/ ದಾನವಾಗಿ ಪಡೆಯಲು ಅನುಮತಿ/ ವಿನಾಯಿತಿಯನ್ನು ನೀಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ಕ್ಕೆ ಅನುಗುಣವಾಗಿ ಇರುವುದರಿಂದ ಬಂಗಾರಪೇಟೆ ತಾಲ್ಲೂಕು, ಕಸಬ ಹೋಬಳಿ, ಅನಿಗಾನಹಳ್ಳಿ ಗ್ರಾಮದ ಸ.ನಂ. 95ರಲ್ಲಿ 2-00 ಎಕರೆ (ಎರಡು ಎಕರೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಅಧ್ಯಕ್ಷರು, ಇಂಡಿಜೀನಸ್ ಪೀಪಲ್ ಎಜುಕೇಷನಲ್ ಟ್ರಸ್ಟ್ (ರಿ), ಹಂಚಾಳ ಗೇಟ್ ಬಂಗಾರಪೇಟೆ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79 ಬಿ ಮತ್ತು 80ಕ್ಕೆ ವಿನಾಯಿತಿಯನ್ನು ನೀಡಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (1) (ii) ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲ್ಕಂಡ ಜಮೀನು ಕೋಲಾರ-ಬಂಗಾರಪೇಟೆ ರಸ್ತೆ. ಹಾಗೂ ಸಿದ್ದನಹಳ್ಳಿ ರಸ್ತೆಯ ಬಾಜು ಇರುವುದರಿಂದ ರಸ್ತೆಗಳಿಗೆ ಯಾವುದೇ ತೊಂದರೆಯಾಗದಂತೆ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನುಗಳನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಬಿ. ಎಸ್. ರಾಮಪ್ರಸಾದ್**

ಪಿ.ಆರ್.477 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪೂರ ಇವರ ಕಛೇರಿ ನಡುವಳಿ**

**ಉಪಸ್ಥಿತರು :** ಶಾಮ ಸಾವಳಗಿ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಪ್ರಭಾರ) ವಿಜಾಪೂರ ಜಿಲ್ಲೆ, ವಿಜಾಪೂರ.

**ಫಿರ್ಯಾದುದಾರರು :** ಪಿ.ಎಸ್.ಐ. ಝಳಕಿ ಪೊಲೀಸ್ ಠಾಣೆ, ಗುನ್ನೆ ನಂ. 39:94 ದಿನಾಂಕ: 23.5.1994

**ವಿರುದ್ಧ**

**ಆರೋಪಿಗಳು :**
1 ರಘುವೀರಸಿಂಗ ಅಲಿಯಾಸ ಜಿಲ್ಲಾ ತಂದಿ, ಸಾದುಸಿಂಗ ಸಾ: ಟಾಡಾ ಖಿರ್ದು ಜಿಲ್ಲಾ: ಹೊಷಿಯಾರಪೂರ ರಾಜ್ಯ: ಪಂಜಾಬ, (ಲಾರಿ ಡ್ರೈವರ್)
2 ಸತ್ನಾಮಸಿಂಗ ದರ್ಶನಸಿಂಗ ಸಾ: ಅಮೃತಸರ, ಪಂಜಾಬ ರಾಜ್ಯ, ಲಾರಿ ಡ್ರೈವರ್
3 ಚಂದ್ರಮಣಿ ಲಂಪತ ಮೌರ್ಯ ಎ: 1ಎ:5:5, ಸೆಕ್ಟರ್ ನಂಬರ್:2 ಕೊಕನ ಭವನ, ನಾವಿ, ಮುಂಬೈ ಜಿಲ್ಲಾ: ಠಾಣೆ, ಮಹಾರಾಷ್ಟ್ರ ರಾಜ್ಯ (ವಾಹನದ ಮಾಲೀಕ)

**ಪ್ರಸ್ತಾವನೆ:**

ದಿನಾಂಕ: 23.5.1994 ರಂದು ಝಳಕಿ ಠಾಣೆಯ ವ್ಯಾಪ್ತಿಯಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೆ ಟ್ಯಾಂಕರ ನಂಬರ್: ಎಂಸಿಯು 4530 ನೇದ್ದರಲ್ಲಿ ಸುಮಾರು 9750 ಕೆ. ಜಿ. ಸ್ಪಿರೀಟನ್ನು ಸಾಗಾಟ ಮಾಡುತ್ತಿದ್ದ ಕಾರಣ ಕರ್ನಾಟಕ ಅಬಕಾರಿ ಕಾಯ್ದೆ, ಕಲಂ 32, 33, ಮತ್ತು 34 ರ ಪ್ರಕಾರ ಗುನ್ನೆ ನಂಬರ್ 39:94, ನೇದ್ದರ ಕೆಳಗೆ ಪ್ರಕರಣವನ್ನು ದಾಖಲು ಮಾಡಿ, ಮುದ್ದೇಮಾಲನ್ನು ಅಬಕಾರಿ ನಿರೀಕ್ಷಕರು ಇಂಡಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ. ಪ್ರಥಮ ಮಾಹಿತಿ ವರದಿ, ಪಂಚನಾಮಾ ಪ್ರತಿ, ಸ್ವತ್ತಿನ ಪಟ್ಟಿ, ಮತ್ತು ವಾಹನಕ್ಕೆ ಸಂಬಂಧಪಟ್ಟ ಇತರೆ ದಾಖಲೆಗಳನ್ನು ಜಪ್ತು ಮಾಡಿದ್ದು ಅವುಗಳ ಜೆರಾಕ್ಸ್ ಪ್ರತಿಗಳನ್ನು ಈ ಪ್ರಾಧಿಕೃತ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಬಗ್ಗೆ ಬಿ-ವಹಿ ನಕಲನ್ನು ಕಳುಹಿಸುವ ಕುರಿತು ಈ ಪ್ರಾಧಿಕೃತ ನ್ಯಾಯಾಲಯದಿಂದ ದಿನಾಂಕ: 26.11.2002 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಠಾಣೆ, ಮಹಾರಾಷ್ಟ್ರ ರಾಜ್ಯ ಇವರಿಗೆ ಪತ್ರ ಬರೆಯಲಾಗಿ ಅವರಿಂದ ಪಡೆಯಲಾದ ಬಿ- ವಹಿಯಲ್ಲಿ ಚಂದ್ರಮಣಿ ಲೆಂಪತ ಮೌರ್ಯ, ಎ-1ಎ: 5:5, ಸೆಕ್ಟರ್ ನಂ.2, ಕೊಕನ ಭವನ, ನಾವಿ, ಮುಂಬೈ ಠಾಣಾ ಮಹಾರಾಷ್ಟ್ರ ಇವರು ವಾಹನದ ಮಾಲೀಕರೆಂದು ಸದರಿ ವಾಹನಕ್ಕೆ ಟ್ಯಾಂಕರ್ ನಂಬರ್: ಎಂಸಿಯು 4530 ನೇದ್ದರ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಠಾಣಾ ಇವರಿಂದ ಪಡೆದುಕೊಂಡು ಇರುತ್ತದೆ.

ಈ ಪ್ರಾಧಿಕೃತ ನ್ಯಾಯಾಲಯದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ದಿನಾಂಕ: 3.4.2003 ರಂದು ಚಂದ್ರಮಣಿ ಲೆಂಪತ ಮೌರ್ಯ, ಕೋಕನ ಭವನ ನಾವಿ ಮುಂಬೈ, ಠಾಣಾ ಮಹಾರಾಷ್ಟ್ರ ರಾಜ್ಯ ಇವರಿಗೆ ನೋಂದಾಯಿತ ಅಂಚೆಯ ಮೂಲಕ ರವಾನಿಸಲಾಗಿದ್ದು ನೋಟಿಸ್ ಜಾರಿಯಾಗದೇ ಮರಳಿ ಬಂದಿದ್ದರಿಂದ ಈ ಬಗ್ಗೆ ಪುನಃ ಈ ಪ್ರಾಧಿಕೃತ ನ್ಯಾಯಾಲಯದಿಂದ ದಿನಾಂಕ: 6.8.2003 ರಂದು ಮತ್ತೊಂದು ಕಾರಣ ಕೇಳುವ ನೋಟಿಸನ್ನು ಅಬಕಾರಿ ನಿರೀಕ್ಷಕರು ಇಂಡಿ ವಲಯ ಇವರ ಮುಖಾಂತರ ಜಾರಿಗೊಳಿಸಲು ಕ್ರಮ ಕೈಕೊಳ್ಳಲಾಯಿತು. ನೋಟಿಸನ್ನು ಅಬಕಾರಿ ನಿರೀಕ್ಷಕರು ಇಂಡಿ ವಲಯ ಇವರ ಕಛೇರಿ ವರದಿ ನಂಬರ್: ಅಬಕಾರಿ: ಅಪರಾಧ:3:93-94:96 ದಿನಾಂಕ: 23.8.2003 ರಂದು ವರದಿ ಸಲ್ಲಿಸುತ್ತಾ, ಷೋಕಾಸ್ ನೋಟಿಸನ್ನು ಚಂದ್ರಮಣಿ ಲಿಂಪೆಟ್ ಮೌರ್ಯ, ಇವರಿಗೆ ಜಾರಿ ಮಾಡಲು ನಾನು ಅಬಕಾರಿ ರಕ್ಷಕ ನೊಂದಿಗೆ ದಿನಾಂಕ: 19.8.2003 ರಂದು ಸಿ.ಬಿ.ಡಿ. ಪೊಲೀಸ್ ಠಾಣೆ ಮುಂಬಯಿ ಇವರ ಸಿಬ್ಬಂದಿಯೊಂದಿಗೆ ಹೋಗಿ ವಿಚಾರಣೆ ಮಾಡಲಾಗಿ ಸದರಿ ವಿಳಾಸದಲ್ಲಿ ಇದ್ದಂತೆ (ಅಡ್ರೆಸ್) ಇಲ್ಲಿ ಯಾರು ಇಲ್ಲಾ ಅಂತಾ ಹೇಳಿದರು. ಹಾಗೂ ಸುತ್ತಲಿನ ಜನರಿಗೆ ಅವರ ಇರುವಿಕೆ ಬಗ್ಗೆ ವಿಚಾರಿಸಿದರೂ ಕೂಡ ಸದರಿ ಶ್ರೀ ಚಂದ್ರಮಣಿ ಲಿಂಪೆಟ ಮೌರ್ಯ, ಅನ್ನುವರು ಯಾರೂ ಇಲ್ಲಿ ಇರುವುದಿಲ್ಲಾ ಹಾಗೂ ಪರಿಚಯ ಇಲ್ಲವೆಂದು ಹೇಳಿದರು. ಕಾರಣ ಷೋಕಾಸ್ ನೋಟಿಸು ಜಾರಿ ಮಾಡುವುದು ಸಾಧ್ಯವಾಗಿರುವುದಿಲ್ಲಾ. ಈ ಕುರಿತು ನಮ್ಮೊಂದಿಗೆ ಬಂದಿದ್ದ ಪಿ.ಎಂ. ತಾಂಬೆ, ಕಾನ್‌ಸ್ಟೇಬಲ್, ಸಿ.ಬಿ.ಡಿ. ಪೋಲಿಸ್ ಸ್ಟೇಶನ್ ಬಾಂಬೆ, ಇವರಿಂದ ಹೇಳಿಕೆಯನ್ನು ಪಡೆದುಕೊಂಡು ತಮ್ಮ ವರದಿಯೊಂದಿಗೆ ಸಲ್ಲಿಸಿರುತ್ತಾರೆ.

ತದನಂತರ ಈ ಪ್ರಾಧಿಕೃತ ನ್ಯಾಯಾಲಯವು ದಿನಾಂಕ: 18.12.2003 ರಂದು ಸಂಕಲನಾಧಿಕಾರಿ, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ಕರ್ನಾಟಕ ರಾಜ್ಯ ಪತ್ರ ಭಾಗ-3, ಗುರುವಾರ, ಜನವರಿ 8, 2004 ರಂದು ಸದರಿ ಪ್ರಕರಣದಲ್ಲಿ ಜಪ್ತಾದ ಟ್ಯಾಂಕರ್ ನಂಬರ್: ಎಂಸಿಯು 4530 ಹಾಗೂ 9750 ಲೀಟರ್ ಮದ್ಯಸಾರದ ಬಗ್ಗೆ ವಾಹನದ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸೂಚಿಸಲಾಗಿತ್ತು. ಈ ಪ್ರಕಟಣೆ ಆದ 15 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ಪ್ರಕಟಣೆಯು 8.1.2004 ರಂದು ರಾಜ್ಯಪತ್ರದಲ್ಲಿ ಪ್ರಕಟಗೊಂಡಿದ್ದು ಇದುವರೆಗೆ ಈ ವಾಹನದ ಬಗ್ಗೆ ಅಹವಾಲನ್ನು ಯಾರೂ ಸಲ್ಲಿಸಿರುವುದಿಲ್ಲಾ.

ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ 1967ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿದೆ ಎಂಬ ಸಾಕ್ಷಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ವಾಹನವನ್ನು ಇನ್ನು ಹೆಚ್ಚು ದಿನಗಳ ಕಾಲ ತಟಸ್ಥ ಸ್ಥಿತಿಯಲ್ಲಿ ಇಲಾಖೆಯ ವಶದಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ಸ್ವಾಭಾವಿಕ ಬದಲಾವಣೆಗಳಿಗನುಗುಣವಾಗಿ ವಾಹನದ ಮೌಲ್ಯವು ಹಾಲಿ ಈಗಿರುವ ಮೌಲ್ಯಕ್ಕಿಂತ ಇಳಿಮುಖಗೊಂಡು ಸರ್ಕಾರದ ರಾಜಸ್ವಕ್ಕೆ ಧಕ್ಕೆಯುಂಟಾಗುವ ಸಂಭವವಿರುವುದರಿಂದ ಮತ್ತು ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶದ ನಂಬರ್: ಇಎಕ್ಸ್:ಇ:ಸಿಆರ್ಎಂ:2: 93-94, ದಿನಾಂಕ: 6ನೇ ಮಾರ್ಚ್ 2004**

ಶ್ಯಾಮ ಸಾವಳಗಿ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಜಾಪೂರ ಜಿಲ್ಲೆ ವಿಜಾಪೂರ (ಪ್ರಭಾರ) ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ)

ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಎಂಸಿಯು: 4530 (ಟ್ಯಾಂಕರ್)ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 6.3.2004 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಶಾಮ ಸಾವಳಗಿ

ಪಿ.ಆರ್.478 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪುರ.

## ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರವರ ಕಛೇರಿ, ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದ ನಡುವಳಿಗಳು

**ಉಪಸ್ಥಿತರು :** ಶ್ರೀ ಶಾಮ ಸಾವಳಗಿ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಜಾಪೂರ ಜಿಲ್ಲೆ, ವಿಜಾಪೂರ.

**ಫಿರ್ಯಾದುದಾರರು :** ಪಿ.ಎಸ್.ಐ. ಮನಗೂಳಿ ಪೊಲೀಸ್ ಠಾಣೆ 29:2003 ದಿನಾಂಕ: 25.3.03 ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರ ಗುನ್ನೆ ನಂಬರ್: 22:02-03 ದಿನಾಂಕ: 28.3.03

**ವಿರುದ್ಧ**

**ಆರೋಪಿಗಳು :**
1. ಶಂಕ್ರಯ್ಯ ತಂದಿ ಪುಲಕೇಶಿ ಸಿಕ್ಕೇರಿ ಚಿಲಕಮ್ಮನಗರ, ಸಾ: ಮುದ್ದೇಬಿಹಾಳ
2. ಶ್ರೀಕಾಂತ ತಂದಿ ಖೇರಪ್ಪ ನಾಯಕ (ಲಮಾಣಿ) ಮುದ್ದೇಬಿಹಾಳ.
3. ಈಶ್ವರಪ್ಪ ಕಡಕೋಳ ತಂದಿ: ಎಸ್. ಕಡಕೋಳ ವಾಸಸ್ಥಳ, ಮನೆ ನಂ: 202, ಮಂದೂರ ಹಿಲ್, ವಾಸ್ಕೊ: ಗೋವಾ, ವಾಹನದ ಮಾಲೀಕ.

**ಪ್ರಸ್ತಾವನೆ:**

ದಿನಾಂಕ: 25.3.2003 ರಂದು ಮಧ್ಯಾಹ್ನ 1-45 ಸಮಯದಲ್ಲಿ ಬಂದೋಬಸ್ತಿ ಕೆಲಸ ಮುಗಿಸಿಕೊಂಡು ಬರುವಾಗ ಸುಜುಕಿ ಸಮರಾಯ್ ಮೋಟಾರ್ ಸೈಕಲ್ ನಂಬರ್: ಚೆಸ್ಸಿ ನಂಬರ್: 700:3 ಎಫ್:589144 ಹಾಗೂ ಇಂಜಿನ್ ನಂಬರ್ 700-3ಎಂ:640369, ಗಾಡಿ ನಂ:ಜಿಎ:02:ಎಲ್:3674 ನೇದ್ದರಲ್ಲಿ 180 ಮಿಲಿಯ ಓರಿಜಿನಲ್ ಚಾಯ್ಸ್ ವಿಸ್ಕಿಯ 65 ಬಾಟ್ಲಿಗಳು, ಖೋಡೆ ತ್ರಿಎಕ್ಸ್‌ರಮ್ 180 ಮಿಲಿಯ 25 ಬಾಟ್ಲಿಗಳು, ಸಾಗಿಸುತ್ತಿದ್ದಾಗ ಪತ್ತೆ ಮಾಡಿ ಗುನ್ನೆ ನಂ: 29: 02-03, ದಾಖಲಿಸಿ ಅಬಕಾರಿ ಇಲಾಖೆಗೆ ಮುದ್ದೇಮಾಲು ಸಹಿತ ಹಸ್ತಾಂತರಿಸಿದ್ದು ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರ ಗುನ್ನೆ ನಂ:22:02-03, ದಿನಾಂಕ: 28.3.2003 ರಂದು ದಾಖಲಿಸಿ ಈ ಪ್ರಾಧಿಕೃತ ನ್ಯಾಯಾಲಯಕ್ಕೆ ಪ್ರಥಮ ಮಾಹಿತಿ ವರದಿಯನ್ನು ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು ಬ. ಬಾಗೇವಾಡಿ ವಲಯ ಇವರು ತನಿಖಾ ವರದಿ ಸಲ್ಲಿಸಿ ಸದರಿ ವಾಹನದ ನೋಂದಣಿ ನಂಬರ್: ಜಿಎ: 02:ಎಲ್:3674 ಇದ್ದು ಅದರ ವಾಹನದ ಮಾಲೀಕ ಈಶ್ವರಪ್ಪ ಕಡಕೋಳ ತಂದಿ: ಎಸ್ ಕಡಕೋಳ ವಾಸಸ್ಥಳ: ಮನೆ ನಂ:202, ಮಂಗೋರ ಹಿಲ್, ವಾಸ್ಕೊ ಗೋವಾ ಇರುತ್ತದೆ ಎಂದು ತಿಳಿಸಿರುತ್ತಾರೆ.

ತದನಂತರ ಸದರಿ ಪ್ರಕರಣದಲ್ಲಿ ಜಪ್ತಾದ ಮದ್ಯವನ್ನು ರಸಾಯನಿಕ ವಿಶ್ಲೇಷಣಾ ತಜ್ಞರು ಬೆಂಗಳೂರು ಇವರಿಗೆ ಮಾದರಿ ತೆಗೆದು ಕಳುಹಿಸಲಾಗಿ ಅವರ ವರದಿ ನಂಬರ್: ಸಿಸಿಎಲ್:3052:2003, ದಿನಾಂಕ: 16.6.2003 ನಿಗದಿಪಡಿಸಿದ ಜೋರುಕ್ಕಿಂತ ಹೆಚ್ಚಿಗೆ ಇದ್ದು ಖೋಡೆ ತ್ರಿಎಕ್ಸ್ ರಮ್ ಮದ್ಯದ ಬಾಟ್ಲಿಯಲ್ಲಿ 41.2 ಯು.ಪಿ. ಮತ್ತು ಒರಿಜನಲ್ ಚಾಯ್ಸ್ ವಿಸ್ಕಿ ಮದ್ಯದ ಬಾಟ್ಲಿಯಲ್ಲಿ 35.3 ಯು. ಪಿ. ಮದ್ಯದ ಜೋರು ಇದ್ದು ಇದು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲಾ ಅಂತಾ ತಿಳಿಸಿರುತ್ತಾರೆ.

ಈ ಪ್ರಾಧಿಕೃತ ನ್ಯಾಯಾಲಯದಿಂದ ದಿನಾಂಕ: 26.8.2003 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಆರೋಪಿತರಿಗೆ ಹಾಗೂ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟಿಸನ್ನು ನೀಡಿ, ನೋಟಿಸು ತಲುಪಿದ 15 ದಿನಗಳ ಒಳಗೆ ಈ ಪ್ರಾಧಿಕಾರಕ್ಕೆ ವಿವರಣೆಯನ್ನು ಲಿಖಿತ ರೂಪದಲ್ಲಿ ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ನೋಟಿಸನ್ನು ಅಬಕಾರಿ ನಿರೀಕ್ಷಕರು. ಬ. ಬಾಗೇವಾಡಿ ವಲಯ ಇವರು ಜಾರಿ ಮಾಡಿ, ಜಾರಿ ಮಾಡಿದ ಪ್ರತಿಯನ್ನು ಈ ಪ್ರಾಧಿಕೃತ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ನೋಟಿಸು ದಿನಾಂಕ: 11.9.2003 ರಂದು ಸ್ವೀಕೃತಿಯಾಗಿದ್ದು ಇದುವರೆಗೆ ಯಾವುದೇ ರೀತಿಯ ವಿವರಣೆಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲಾ.

ಮೇಲ್ಕಂಡ ಅಂಶಗಳಿಂದ ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶದ ನಂಬರ್: ಇಎಕ್ಸ್ಇ: ಡಿಟಿಸಿಆರ್:351:2958:2002-03, ದಿನಾಂಕ: 6ನೇ ಮಾರ್ಚ್ 2004

ಶ್ಯಾಮ ಸಾವಳಗಿ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಜಾಪೂರ ಜಿಲ್ಲೆ: ವಿಜಾಪೂರ (ಪ್ರಭಾರ) ವಿಜಾಪೂರ ಜಿಲ್ಲೆ, ವಿಜಾಪೂರ ಆದ ನಾನು, ನನಗೆ, ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಪಿ.ಎಸ್.ಐ. ಮನಗೂಳಿ ಪೋಲಿಸ್ ಠಾಣೆ ಇವರ ಗುನ್ನೆ ನಂ: 29: 2003, ದಿನಾಂಕ: 25.3.2003 ಹಾಗೂ ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರ ಗುನ್ನೆ ನಂ: 22:02-03, ದಿನಾಂಕ: 28.3.2003 ರಲ್ಲಿ ಜಪ್ತು ಆಗಿರುವ ಒರಿಜನಲ್ ಚಾಯ್ಸ್ ವಿಸ್ಕಿಯ 180 ಮಿಲಿಯ 65 ಬಾಟ್ಲಿಗಳು, ಖೋಡೆ ತ್ರಿಎಕ್ಸ್ ರಮ್ 180 ಮಿಲಿಯ 25 ಬಾಟ್ಲಿಗಳು, ಮಾದರಿ ಬಾಟ್ಲಿಗಳನ್ನು ಹೊರತುಪಡಿಸಿ ಮತ್ತು ಸುಜುಕಿ ಮೋಟಾರ್ ಸೈಕಲ್ (ಸಮರಾಯ್) ವಾಹನ ಜಿಎ: 02: ಎಲ್: 3674, ಚೆಸ್ಸಿ ನಂ:700:3 ಎಫ್:589144, ಹಾಗೂ ಇಂಜಿನ್ ನಂಬರ್: 700-3ಎಂ: 640369, ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯದ ಬಾಟ್ಲಿಗಳನ್ನು (ಮಾದರಿ ಬಾಟ್ಲಿ ಹೊರತುಪಡಿಸಿ) ಅಬಕಾರಿ ನಿರೀಕ್ಷಕರು ಬ. ಬಾಗೇವಾಡಿ ವಲಯ ಇವರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿ ನಾಶಪಡಿಸಿ ಈ ನ್ಯಾಯಾಲಯಕ್ಕೆ ವರದಿ ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 6.3.2004 ರಂದು ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ, ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಶಾಮ ಸಾವಳಗಿ**

ಪಿ.ಆರ್.479 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪುರ.

## ಕರ್ನಾಟಕ ಅರಣ್ಯ ಇಲಾಖೆ

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ರವರ ನ್ಯಾಯಾಲಯ

**ಸಂಖ್ಯೆ: ಎ871(ಎ)ಸಿಆರ್:59,73,3/ 03-04 ದಿನಾಂಕ: 5ನೇ ಮಾರ್ಚ್ 2004**

**ವಿಷಯ :** ಶ್ರೀಗಂಧ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಎ) ಪ್ರಕಾರ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ನ್ಯಾಯಾಲಯದಿಂದ ಹೊರಡಿಸಿದ ಆದೇಶ ಸಂಖ್ಯೆಗಳು.

1) ಎ8/71 (ಎ) CR-73/ 03-04 ದಿನಾಂಕ: 7.11.03

2) ಎ8/71(ಎ) ಅಮೋ 3/03-04 ದಿನಾಂಕ: 10.12.03.

3) ಎ8 ಶ್ರೀಗಂಧ ಮೊಕದ್ದಮೆ 59/03-04 ದಿನಾಂಕ: 27.12.03.

ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71(ಎ) ಯಿಂದ 71(ಜಿ) ವರೆಗೆ ಅನುಗುಣವಾಗಿ ಈ ನ್ಯಾಯಾಲಯದಲ್ಲಿ ನಡವಳಿಕೆಗಳನ್ನು ನಡೆಸಿ ಕ್ರಮವಾಗಿ ದಿನಾಂಕ: 7.11.03, 10.12.03 ಮತ್ತು 27.12.03 ರಂದು ಆದೇಶ ಹೊರಡಿಸಿ, ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳ ಮತ್ತು ಅರಣ್ಯ ಉತ್ಪನ್ನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆ ರುಜುವಾತುಪಡಿಸಲು ಅಪೇಕ್ಷಿಸಿದ ವ್ಯಕ್ತಿಯು ಈ ಪ್ರಕಟಣೆಯ 30 ದಿನಗಳ ಒಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ಅವರ ಹಕ್ಕು ಬಾಧ್ಯತೆ ಮತ್ತು ಮಾಲೀಕತ್ವವನ್ನು ರುಜುವಾತುಪಡಿಸಲು ತಿಳಿಸಲಾಗಿತ್ತು. ಸದರಿ ಪ್ರಕಟಣೆ ಪ್ರಕಟಗೊಂಡ 30 ದಿನಗಳ ಒಳಗೆ ಯಾವುದೇ ಅಹವಾಲು ಇಲ್ಲದಿದ್ದಲ್ಲಿ ಸರ್ಕಾರದ ಪರವಾಗಿ ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದೂ ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 25.12.03, 15.1.04 ಮತ್ತು 27.12.03 ರಂದು ಪ್ರಕಟಿಸಲಾಗಿದೆ.

ಮೇಲ್ಕಂಡ 1.12.03, 10.12.03 ಮತ್ತು 27.12.03 ರ ಪ್ರಕಟಣೆಗಳು ಪ್ರಕಟಗೊಂಡು 30 ದಿನಗಳ ಒಳಗಾಗಿ ಯಾವುದೇ ಅಹವಾಲುಗಳು ಬಂದಿಲ್ಲವಾಗಿರುವುದರಿಂದಲೂ ಮತ್ತು ಯಾರೊಬ್ಬರೂ ಈವರೆಗೆ ಈ ಕೆಳಕಂಡ ವಾಹನಗಳು ಮತ್ತು ಅರಣ್ಯ ಉತ್ಪನ್ನವನ್ನು ತಮ್ಮದೆಂದು ರುಜುವಾತು ಪಡಿಸಿರುವುದಿಲ್ಲ, ಸದರಿ ವಾಹನಗಳ ವಾರಸುದಾರರು ಈ ಅರಣ್ಯ ಅಪರಾಧಗಳಲ್ಲಿ ಭಾಗಿಯಾಗಿಲ್ಲವೆಂದು ರುಜುವಾತು ಪಡಿಸಿರುವುದಿಲ್ಲವಾದ್ದರಿಂದ ವಾಹನಗಳು ಹಾಗೂ ವಾಹನಗಳ ವಾರಸುದಾರರು ಈ ಕೆಳಕಂಡ ಶೆಡ್ಯೂಲ್‌ನಲ್ಲಿರುವ ಅರಣ್ಯ ಅಪರಾಧಗಳಲ್ಲಿ ಭಾಗಿಯಾಗಿರುತ್ತಾರೆಂದು ತಿಳಿದು ಬಂದಿರುತ್ತದೆ.

ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71(ಎ) ಯಿಂದ 71(ಜಿ)ರ ಪ್ರಕಾರ ಈ ಕೆಳಕಂಡ ವಾಹನಗಳು ಮತ್ತು ಅರಣ್ಯ ಉತ್ಪನ್ನಗಳನ್ನು ಈ ಆದೇಶದ ದಿನಾಂಕದಂದು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದನ್ವಯ ಈ ಕೆಳಕಂಡ ವಾಹನಗಳು ಹಾಗೂ ಅರಣ್ಯ ಉತ್ಪನ್ನದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ, ಯಾವುದೇ ರೀತಿಯ ಹಕ್ಕು ಇರುವುದಿಲ್ಲ. (ಸರ್ಕಾರವನ್ನು ಹೊರತುಪಡಿಸಿ).

| ಕ್ರಮ ಸಂಖ್ಯೆ | ಅರಣ್ಯ/ಮೊಕದ್ದಮೆ ಅಥವಾ ಪೊಲೀಸ್ ಕ್ರೈಮ್ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನದ ವಿವರ | ವಾಹನಗಳನ್ನು ಸರ್ಕಾರಕ್ಕೆ ಅಮಾನತ್ತು ಪಡಿಸಿಕೊಂಡ ಸ್ಥಳ ಮತ್ತು ದಿನಾಂಕ |
|---|---|---|---|---|
| 1. | ಕ್ರೈಮ್ ಸಂಖ್ಯೆ 73/03-04 | CMM-6790 Bajaj scooter | 8 Kg. ಶ್ರೀಗಂಧದ ಚಕ್ಕೆ | 16.4.03 ಶಿವನಗೆರೆ ರಸ್ತೆ, ಮಧುಗಿರಿ ತಾ: |
| 2. | ಅಮೋ 3/03-04 | KA-06-K-9883 TVS-50-XL | 20 Kg. ಶ್ರೀಗಂಧ ತುಂಡು | ಹುಳಿಯಾರು ಹೋಬಳಿ ದಸೂಡಿ-ಸೋಮನಹಳ್ಳಿ ರಸ್ತೆ ರಂಗನಕೆರೆ ಎಂಬಲ್ಲಿ ರಸ್ತೆಗೆ ಹೊಂದಿಕೊಂಡಿರುವ ಸಸ್ಯಕ್ಷೇತ್ರದ ಬಳಿ |
| 3. | ಕ್ರೈಮ್ ಸಂಖ್ಯೆ 59/03-04 | ಮುಂಭಾಗ-KA-13-6592 ಹಿಂಭಾಗ CRX-6693 ಬಿಳಿ ಮಾರುತಿ ಕಾರು | 185 Kg. ಶ್ರೀಗಂಧದ ತುಂಡುಗಳು | 28.5.01 ಶಿರಾ-ಅಮರಾಪುರ ರಸ್ತೆ |

ದಿನಾಂಕ: 5.3.04 ರಂದು ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಗಾ. ನಂ. ಶ್ರೀಕಂಠಯ್ಯ**

ಪಿ.ಆರ್.480 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು.

## ಲೋಕೋಪಯೋಗಿ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಲೋಇ 193 ಸೇಸಕಿ 2003 ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2004**

ಅಧಿಸೂಚನೆ ಸಂಖ್ಯೆ: ಲೋಇ 108 ಎಸ್‌ಪಿಎನ್ 2002 ದಿನಾಂಕ: 11.4.2002 ರಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ: 1.3.2002ರಲ್ಲಿದ್ದಂತೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಲ್ಲಿ ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ (ವಿದ) ಇವರಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಜೇಷ್ಠತಾ ಕ್ರಮ ಸಂಖ್ಯೆಯು 2219 (ಕಿರಿಯ ಇಂಜಿನಿಯರ್ 5724)ರಲ್ಲಿ ಪ್ರತಿಬಿಂಬವಾಗಿದೆ. ನಂತರ, ಶ್ರೀ ಮಲ್ಲೇಶ್ವರಪ್ಪ ಇವರು ದಿನಾಂಕ: 11.4.2002 ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ಸಿ. ಕೊಂಡಯ್ಯ (ಪರಿಶಿಷ್ಟ ಜಾತಿ) ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ: 1764 (ಕಿರಿಯ ಇಂಜಿನಿಯರ್ 5726)ರಲ್ಲಿ ನಿಗದಿಪಡಿಸಿ ಅರ್ಹತಾ ದಿನಾಂಕ: 15.9.95 ಎಂದು ನಿಗದಿಪಡಿಸಿರುವುದರಿಂದ ತಮಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-2) ಹುದ್ದೆಗೆ ಬಡ್ತಿ ನೀಡುವ ಸಂದರ್ಭದಲ್ಲಿ ಅನ್ಯಾಯವಾಗಲಿದೆಯೆಂದು, ತಮ್ಮ ಜೇಷ್ಠತೆಯ ಸ್ಥಾನವನ್ನು ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ಸಿ. ಕೊಂಡಯ್ಯ (ಪರಿಶಿಷ್ಟ ಜಾತಿ) ಇವರ ಜೇಷ್ಠತೆಯ ಮೇಲೆ ನಿಗದಿಪಡಿಸುವಂತೆ ಕೋರಿರುತ್ತಾರೆ. ದಿನಾಂಕ: 11.4.2002 ರಂದು ಪ್ರಕಟಗೊಂಡಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಕೆ. ಸಿ. ಕೊಂಡಯ್ಯ ಇವರ ಜೇಷ್ಠತಾ ಕ್ರಮ ಸಂಖ್ಯೆ: 1764 (ಕಿರಿಯ ಇಂಜಿನಿಯರ್ 5726)ನ್ನು ಆಧಾರವಾಗಿಟ್ಟು ಶ್ರೀ ಮಲ್ಲೇಶ್ವರಪ್ಪ ಇವರ ಜೇಷ್ಠತೆಯನ್ನು ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಪುನರ್‌ನಿಗದಿಪಡಿಸುವ ಸರ್ಕಾರದ ಕ್ರಮದ ಬಗ್ಗೆ ಯಾವುದೇ ಅಹವಾಲು: ಆಕ್ಷೇಪಣೆ ಇದ್ದಲ್ಲಿ ಅವುಗಳನ್ನು ಸಮರ್ಥಿಸುವಂತಹ ಸೂಕ್ತ ದಾಖಲೆ ಸಮೇತ ಸರ್ಕಾರಕ್ಕೆ 15 ದಿವಸದೊಳಗಾಗಿ ಸಲ್ಲಿಸುವಂತೆ ಸಮ ಸಂಖ್ಯೆಯ ದಿನಾಂಕ: 7.2.04ರ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಬಗ್ಗೆ ಯಾವುದೇ ಆಕ್ಷೇಪಣೆ: ಅಹವಾಲುಗಳು ಸ್ವೀಕೃತವಾಗಿಲ್ಲದೇ ಇರುವುದರಿಂದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾದ ದಿನಾಂಕ: 11.4.2002ರ ಅಧಿಸೂಚನೆ ಸಂಖ್ಯೆ: ಲೋಇ: 108 ಎಸ್‌ಪಿಎನ್ 02ರಲ್ಲಿ ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರ ಜೇಷ್ಠತೆಯನ್ನು ಈ ಕೆಳಕಂಡಂತೆ ಸೂಕ್ತ ಸ್ಥಾನದಲ್ಲಿ ಪುನರ್ ನಿಗದಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಕಿ.ಇಂ. ಜೇಷ್ಠತಾ ಪಟ್ಟಿಯಲ್ಲಿನ ಕ್ರ.ಸಂ. | ಇಂಜಿನಿಯರ್ ಹೆಸರು | ಪ.ಜಾ: ಪ.ಪಂ. | ಜನ್ಮ ದಿನಾಂಕ | ವಾಸ್ತವವಾಗಿ ಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1763-ಎ | 5724 | ಮಲ್ಲೇಶ್ವರಪ್ಪ | ಪ.ಜಾ | 19.1.1951 | 23.6.1999 | 15.9.1995 | |

ಈ ತಾತ್ಕಾಲಿಕ ಜೇಷ್ಠತಾ ನಿಗದಿಯು ದಿನಾಂಕ: 11.4.02ರ ಅಧಿಸೂಚನೆ ಸಂಖ್ಯೆ: ಲೋಇ 108 ಸೇಸಕಿ 02ರಲ್ಲಿ ವಿಧಿಸಲಾಗಿರುವ ಷರತ್ತುಗಳಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.481

**ಎಂ. ವೆಂಕಟರಸಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ).

## ಲೋಕೋಪಯೋಗಿ ಇಲಾಖೆ

**ಅಧಿಸೂಚನೆ ಸಂಖ್ಯೆ: ಲೋಇ 05 ಸೇಸಕಿ 2004 ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2004**

ಅಧಿಸೂಚನೆ ಸಂಖ್ಯೆ: ಲೋಇ 108 ಎಸ್‌ಪಿಎನ್ 2002 ದಿನಾಂಕ: 11.4.2002 ರಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ: 1.3.2002 ರಲ್ಲಿದ್ದಂತೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಲ್ಲಿ ಶ್ರೀ ಜಿ.ಡಿ. ಮಂಕಾಳೆ ಇವರಿಗೆ ಕಿರಿಯ ಇಂಜಿನಿಯರ್ ವಿಶೇಷ ದರ್ಜೆ ವೃಂದದಲ್ಲಿ ಜೇಷ್ಟತೆಯು ಕ್ರಮ ಸಂಖ್ಯೆ: 2222 (ಕಿರಿಯ ಇಂಜಿನಿಯರ್ ವೃಂದದಲ್ಲಿ 6159)ರಲ್ಲಿ ಪ್ರತಿಬಿಂಬಿತವಾಗಿದೆ ಮತ್ತು ದಿನಾಂಕ: 10.10.96 ಅರ್ಹತಾ ದಿನಾಂಕವೆಂದು ನಿಗದಿಗೊಂಡಿದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಶ್ರೀ ಜಿ. ಡಿ. ಮಂಕಾಳೆ ಇವರಿಗಿಂತ ಜೇಷ್ಟತೆಯಲ್ಲಿ ಕಿರಿಯರಾಗಿರುವ ಸುಮಾರು 12 ಅಧಿಕಾರಿಗಳು ಈಗಾಗಲೇ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ-2ರ ವೃಂದಕ್ಕೆ ಬಡ್ತಿ ಹೊಂದಿದ್ದು, ಜೇಷ್ಟತೆಯಲ್ಲಿ ಹಿರಿಯರಾಗಿರುವ ಶ್ರೀ ಜಿ. ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ಇವರೂ ಸಹ ಬಡ್ತಿ ಪಡೆಯಲು ಅರ್ಹತೆ ಹೊಂದಿರುವುದರಿಂದ, ಸದರಿಯವರಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯಲ್ಲಿ ಈಗಾಗಲೇ ನಿಗದಿಪಡಿಸಿರುವ ಜೇಷ್ಟತೆ ಕ್ರಮ ಸಂಖ್ಯೆ: 2222 (6159)ಕ್ಕೆ ಬದಲಾಗಿ, ಜೇಷ್ಟತೆ ಕ್ರಮ ಸಂಖ್ಯೆ: 1785 (ಎ) (6159)ರಲ್ಲಿ ನಿಗದಿಪಡಿಸಿ ಹಾಗೂ ಅರ್ಹತಾ ದಿನಾಂಕ: 15.9.95 ಎಂದು ಗೊತ್ತುಪಡಿಸಿ ಸೂಕ್ತ ತಿದ್ದುಪಡಿ ಆದೇಶ ನೀಡಬೇಕೆಂದು ಸರ್ಕಾರವನ್ನು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ದಿನಾಂಕ: 1.12.1993 ರಂದು ಹೊರಡಿಸಿದ ಕಿರಿಯ ಇಂಜಿನಿಯರ್ ಗಳ ಅಂತಿಮ ಜೇಷ್ಟತಾ ಪಟ್ಟಿಯಲ್ಲಿ ಶ್ರೀ ಜಿ. ಡಿ. ಮಂಕಾಳೆ ಇವರು ಶ್ರೀ ಕೆ. ಬಸವರಾಜ್ ಇವರಿಗಿಂತಲೂ ಹಿರಿಯರಾಗಿದ್ದು, ಸದರಿ ಪಟ್ಟಿಯಲ್ಲಿ ಇವರ ಕ್ರಮ ಸಂಖ್ಯೆ: 6159 ಇದ್ದು, ಶ್ರೀ ಬಸವರಾಜ್ ಇವರದು 6160 ಇದೆ.

ಈ ಹಿನ್ನೆಲೆಯಲ್ಲಿ, ಈ ಬಗ್ಗೆ ಪರಿಶೀಲಿಸಿ ದಿನಾಂಕ: 11.4.02 ರಂದು ಪ್ರಕಟಗೊಂಡಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜಿ. ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರ ಜೇಷ್ಠತೆಯನ್ನು ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ಬಸವರಾಜ್ ಇವರ ಜೇಷ್ಠತಾ ಕ್ರಮ ಸಂಖ್ಯೆ: 1786 (ಕಿರಿಯ ಇಂಜಿನಿಯರ್ 6160) ನಿಗದಿಗೊಂಡ ದಿನಾಂಕ: 15.9.95ರ ಅರ್ಹತಾ ದಿನಾಂಕಕ್ಕೆ ಈ ಕೆಳಕಂಡಂತೆ ನಿಗದಿಪಡಿಸಲು ನಿರ್ಧರಿಸಲಾಗಿದೆ. ಅದರಂತೆ, ದಿನಾಂಕ: 11.4.02ರ ಅಧಿಸೂಚನೆಯಲ್ಲಿ ನಮೂದಿಸಿದ ಜೇಷ್ಠತಾ ಕ್ರಮ ಸಂಖ್ಯೆಗಳು ಈ ಕೆಳಕಾಣಿಸಿದಂತೆ ಬದಲಾವಣೆಯಾಗಲಿದೆ.

| ಕ್ರಮ ಸಂಖ್ಯೆ | ಕಿರಿಯ ಇಂಜಿನಿಯರ್ ಹುದ್ದೆಯ ಜೇಷ್ಠತಾ ಕ್ರ.ಸಂ. | ಇಂಜಿನಿಯರ್ ಹೆಸರು | ಪ.ಜಾ: ಪ.ಪಂ. | ಜನ್ಮ ದಿನಾಂಕ | ವಾಸ್ತವವಾಗಿ ಕಿರಿಯ ಇಂಜಿನಿಯರ್ (ವಿದ) ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 2222 | 6159 | ಜಿ.ಡಿ.ಮಂಕಾಳೆ | ಪ.ಜಾ | 10.3.1964 | - | 10.10.1996 | |
| | | | ರ ಬದಲಾಗಿ | | | | |
| 1785-ಎ | 6159 | ಜಿ.ಡಿ.ಮಂಕಾಳೆ | ಪ.ಜಾ | 10.3.1964 | 23.6.99 | 15.9.1995 | |

ಈ ಮೇಲೆ ತಿಳಿಸಿದಂತೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜಿ.ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರಿಗೆ ಜೇಷ್ಠತೆ ಹಾಗೂ ಅರ್ಹತಾ ದಿನಾಂಕವನ್ನು ಪುನರ್‌ನಿಗದಿಪಡಿಸುವ ಬಗ್ಗೆ ಯಾವುದೇ ಅಹವಾಲು: ಆಕ್ಷೇಪಣೆಗಳನ್ನು ಸಲ್ಲಿಸಲು ಇಚ್ಛಿಸುವ ಅಧಿಕಾರಿಗಳು: ನೌಕರರು ಈ ಅಧಿಸೂಚನೆ ಪ್ರಕಟಗೊಂಡ ಒಂದು ವಾರದೊಳಗಾಗಿ ಸೂಕ್ತ ಸಮರ್ಥನೀಯ ದಾಖಲೆಗಳ ಸಮೇತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬಹುಮಹಡಿಗಳ ಕಟ್ಟಡ, 3ನೇ ಮಹಡಿ, 5ನೇ ಹಂತ, ಬೆಂಗಳೂರು-1 ಇವರಿಗೆ ಸಲ್ಲಿಸಬಹುದು. ಈ ಅವಧಿ ಮುಗಿದ ನಂತರ ಸಲ್ಲಿಸಲ್ಪಡುವ ಆಕ್ಷೇಪಣೆ: ಅಹವಾಲುಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.482

**ಎಂ. ವೆಂಕಟರಸಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ).

**ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕ ಮಗಳೂರು ಜಿಲ್ಲೆ, ಚಿಕ್ಕ ಮಗಳೂರು ಇವರ ನ್ಯಾಯಾಲಯದಲ್ಲಿ ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರ ಪ್ರ.ಮಾ.ವ. ಸಂಖ್ಯೆ: 20/2003-04 ದಿನಾಂಕ: 18ನೇ ಅಕ್ಟೋಬರ್ 2003**

**ಡಿ.ಟಿ.ಸಿ.ಆರ್. ಸಂಖ್ಯೆ: 202/2003-04 ದಿನಾಂಕ: 17ನೇ ಮಾರ್ಚ್ 2004**

**ಉಪಸ್ಥಿತರು :** ಪಿ. ಹನುಮೇಗೌಡ ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಫಿರ್ಯಾದುದಾರರು :** ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ

**ವಿರುದ್ಧ**

**ಆಪಾದಿತರು:** ಓಡಿ ಹೋಗಿರುತ್ತಾನೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 18.10.2003 ರಂದು ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ, ಇವರು ಮಾರುತಿ ಓಮ್ನಿ ವ್ಯಾನ್ ಸಂ. ಪಿ. ಬಿ. ಕೆ. 1647 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿದಾಗ, ವಾಹನದ ಚಾಲಕನು ಸ್ಥಳದಲ್ಲಿಯೇ ವಾಹನವನ್ನು ಬಿಟ್ಟು ಓಡಿ ಹೋಗಿದ್ದರಿಂದ, ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 328.320 ಲೀ. ದೇಶಿಯ ಮದ್ಯವಿದ್ದು ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸಲು ಯಾರೂ ಇಲ್ಲವಾದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರಥಮ ವರ್ತಮಾನ ವರದಿ ನಂ. 20/2003-04ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಕೋರಿ ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಜಯನಗರ ಇವರಿಂದ ಪಡೆಯಲಾದ 'ಬಿ' ಎಕ್ಸ್‌ಟ್ರಾಕ್ಟ್ ವರದಿಯ ಆಧಾರದಂತೆ ಶ್ರೀ ಸೈಯದ್ ಇಮ್ರಾನ್ ಬಿನ್ ಸೈಯದ್ ಖಲೀಲ್, ನಂ. 518, ಭವಾನಿ ನಗರ, ಬನಶಂಕರಿ 2 ಸ್ಟೇಜ್, ಬೆಂಗಳೂರು ಇವರು ವಾಹನದ ಅಧಿಕೃತ ಮಾಲೀಕರೆಂದು ತಿಳಿದು ಬಂದಿದ್ದು, ಸದರಿ ಯವರಿಗೆ ಕಲಂ. 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ: 30.12.2003 ರಂದು ನೋಟೀಸ್ "ಇನ್ ಸಫಿಷಿಯಂಟ್ ಅಡ್ರಸ್ಸ್ ಹೆನ್ಸ್ ರಿಟರ್ನ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿದ್ದು, ಮತ್ತೊಮ್ಮೆ ಸದರಿ ವಾಹನದ ಮಾಲೀಕರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ದಿನಾಂಕ: 12.01.2004 ರಂದು ನೋಟೀಸ್ "ಇನ್ ಸಫಿಷಿಯೆಂಟ್ ಅಡ್ರಸ್ಸ್ ಹೆನ್ಸ್ ರಿಟರ್ನ್ಡ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಪುನಃ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ದಿನಾಂಕ: 9.01.2004 ರಂದು ಬೆಂಗಳೂರು ಆವೃತ್ತಿಯ ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸುವ ಮೂಲಕ 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟವರು ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ಅಂತಿಮ ಕಾಲಾವಕಾಶ ನೀಡಲಾಗಿತ್ತು. ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ವಾಹನದ ಹಕ್ಕು ಸಾಧಿಸಲು ಈ ಪ್ರಾಧಿಕಾರದ ಮುಂದೆ ಯಾರು ಹಾಜರಿರುವುದಿಲ್ಲ.

ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಐದು ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟು ಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಕ್ಕು ಸಾಧಿಸದೇ ಇರುವುದರಿಂದ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ವಾಹನದ ಮೌಲ್ಯ ಕಡಿಮೆಯಾಗುತ್ತಾ, ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿ ಮತ್ತು ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಹಾಗೂ ಜಪ್ತು ಮೂಲಕ ವಶಪಡಿಸಿಕೊಂಡ 328:320 ಲೀಟರ್ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳಿಗನುಗುಣವಾಗಿ ಶ್ರೀ ಪಿ. ಹನುಮೇಗೌಡ, ಅಧಿಕಾರಿಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಸಿ.ಬಿ.ಕೆ. 1647 (ಮಾರುತಿ ಓಮ್ನಿ ವ್ಯಾನ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ವಶಪಡಿಸಿಕೊಂಡ 328.320 ಲೀ ಸ್ವದೇಶಿ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 326.700 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದೆ. ರಾಸಾಯನಿಕ ತಜ್ಞರ ವರದಿ ಬಂದ ನಂತರ ಮದ್ಯವು ಮಾನವನ ಸೇವನೆಗೆ ಯೋಗ್ಯವೆಂದು ದೃಢಪಟ್ಟಲ್ಲಿ ಕಾನೂನು ರೀತ್ಯಾ ಮುಂದೆ ವಿಲೇ ಮಾಡಲು ಸೂಕ್ತ ಆದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 17ನೇ ಮಾರ್ಚ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಪಿ.ಆರ್.483 ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಅಧಿಕಾರಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ ಸಂಖ್ಯೆ: ಎಫ್‌ಓಸಿ:ಸಿಐಎನ್:ಸಿಆರ್:25/2003-04 ದಿನಾಂಕ:22ನೇ ಮಾರ್ಚ್ 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಆರಕ್ಷಕ ಉಪ ನಿರೀಕ್ಷಕರು ಮತ್ತು ಸಿಬ್ಬಂದಿವರ್ಗದವರು ಹೊಳೆಹೊನ್ನೂರು ಪೊಲೀಸ್ ಠಾಣೆ ಇವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಮಾರುತಿ ಕಾರು ಕೆಎ-20-ಎಂ-2049 | ಆರಕ್ಷಕ ಉಪ ನಿರೀಕ್ಷಕರು ಹೊಳೆಹೊನ್ನೂರು ಪೋಲೀಸ್ ಠಾಣೆ ಗುನ್ಹೆ ಸಂ:69/03 ದಿನಾಂಕ: 23.6.2003. | ಎಸ್‌ಬಿಐಎನ್ 1109808 | ಎಸ್‌ಬಿ 308 ಐಎನ್ 740567 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್ ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1983ರ ಸೆಕ್ಷನ್-71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್.484 ಅಧಿಕಾರಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು-18 ರವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ: ಎಆರ್‌ಬಿ:50:ದಾವಾ:ಇತರೆ:3:03-04**

**ವಾದಿಗಳು:** ಮ್ಯಾನೇಜರ್ ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕಾಚನಾಯಕನಹಳ್ಳಿ, ಆನೇಕಲ್ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:** ಪಿ. ಶ್ರೀನಿವಾಸ, ಮಾಜಿ ವ್ಯವಸ್ಥಾಪಕರು, ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಬಿನ್ ಪಿಳ್ಳಾರೆಡ್ಡಿ ಯಾರಂಡಹಳ್ಳಿ, ಹೆನ್ನಾಗರ ಅಂಚೆ, ಆನೇಕಲ್ ತಾಲ್ಲೂಕು.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ**

**ನೋಟೀಸು**

ವಾದಿಯವರು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿ ವಾದಿಗಳಿಂದ ಒಟ್ಟು ರೂ. 1,74,127-50 ಗಳನ್ನು ದಿನಾಂಕ: 1998 ರಿಂದ ಶೇಕಡ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವೆ ನಂ. ಎಆರ್‌ಬಿ-50:ದಾವಾ:ಇತರೆ:2003-04 ರನ್ವಯ ಈ ನ್ಯಾಯಾಲಯವು ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಆತನ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಡಿಕ್ರಿ ನೀಡಿದ್ದರೂ ಸದರಿ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ಕಂಡ ನೋಟಕ್ಕೆ ಕಂಡು ಬರುತ್ತಿದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಬಹುದೆಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗುತ್ತದೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ. ಆರ್. ಲಿಂಗರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 1,74,127-50ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾಮಾಡಿ ದಿನಾಂಕ: 17.4.2004 ರೊಳಗಾಗಿ ಅಧಿಕೃತ ಚಲನ್: ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಮೇಲ್ಕಂಡ ಆಸ್ತಿಯ ವಿವರ:**

ಬೆಂಗಳೂರು ನಗರ ಆನೇಕಲ್ ತಾಲ್ಲೂಕು ಹೆನ್ನಾಗರ ಗ್ರಾಮ ಪಂಚಾಯ್ತಿಗೆ ಸೇರಿದ ಆಸ್ತಿಯ ನಂ. 134: 96ರಲ್ಲಿ ಜಂಜರು ನಂ. 164 ವಿಸ್ತೀರ್ಣ 60x40 ನಿವೇಶನದಲ್ಲಿ ಕಟ್ಟಲಾಗಿರುವ ಮನೆ ನಿವೇಶನ ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ ವ್ಯಾಪಾರ ಮಳಿಗೆ ಇತ್ಯಾದಿಗಳಿಗೆ ಚೆಕ್ಕುಬಂದಿ:

ಪೂರ್ವಕ್ಕೆ: ಬೇರೆಯವರ ಸ್ವತ್ತು
ಪಶ್ಚಿಮಕ್ಕೆ: ರಸ್ತೆ
ಉತ್ತರಕ್ಕೆ: ಗೌರಿಶಂಕರ ರೆಡ್ಡಿ
ದಕ್ಷಿಣಕ್ಕೆ: ರಸ್ತೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 22.3.2004 ರಂದು ನೀಡಿರುತ್ತೇನೆ.

ಪಿ.ಆರ್.485 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು.